

# ಕನ್ನಡ ಸಾಹಿತ್ಯ

10

ಪಂಚಿಕೆ



# ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ

# ಎಂಪಿಪಿ

MP

MASTER'S PREPARATORY PROGRAMME

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸ ಗಂಗೋತ್ರಿ, ಮೈಸೂರು - 570 006

ಉನ್ನತ ಶಿಕ್ಷಣಕ್ಕಾಗಿ ಇರುವ ಅವಕಾಶಗಳನ್ನು ಹೆಚ್ಚಿಸುವುದಕ್ಕೆ ಮತ್ತು ಶಿಕ್ಷಣವನ್ನು ಪ್ರಜಾತಂತ್ರೀಕರಿಸುವುದಕ್ಕೆ ಮುಕ್ತ ವಿಶ್ವವಿದ್ಯಾನಿಲಯ ವ್ಯವಸ್ಥೆಯನ್ನು ಆರಂಭಿಸಲಾಗಿದೆ.

**ರಾಷ್ಟ್ರೀಯ ಶಿಕ್ಷಣ ನೀತಿ 1986**

*The Open University system has been initiated in order to augment opportunities for higher education and as instrument of democrating education.*

***National Education Policy 1986***

ಮುಕ್ತ ವಿಶ್ವವಿದ್ಯಾನಿಲಯವು ದೂರಶಿಕ್ಷಣ ಪದ್ಧತಿಯಲ್ಲಿ ಬಹುಮಾಧ್ಯಮಗಳನ್ನು ಉಪಯೋಗಿಸುತ್ತದೆ. ............................ವಿದ್ಯಾಕಾಂಕ್ಷಿಗಳನ್ನು ಜ್ಞಾನ ಸಂಪಾದನೆಗಾಗಿ ಕಲಿಕಾ ಕೇಂದ್ರಕ್ಕೆ ಕೊಂಡೊಯ್ಯುವ ಬದಲು, ಜ್ಞಾನ ಸಂಪತ್ತನ್ನು ವಿದ್ಯೆ ಕಲಿಯುವವರ ಬಳಿ ಕೊಂಡೊಯ್ಯುವ ವಾಹಕವಾಗಿದೆ.

**ಡಾ. ಕುಳಂದೈಸ್ವಾಮಿ**

*"The Open University system makes use of Multimedia in distance education system. ............................ it is vehicle which transports knowledge to the place of learners rather than transport to the place of learning.*

***Dr. Kulandai Swamy***

## ವಿಶ್ವಮಾನವ ಸಂದೇಶ

ಪ್ರತಿಯೊಂದು ಮಗುವು ಹುಟ್ಟುತ್ತಲೇ - ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪ ಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

ಮನುಜ ಮತ, ವಿಶ್ವ ಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ, ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; **ಮನುಜ ಮತ.** ಆ ಪಥ ಈ ಪಥ ಅಲ್ಲ; **ವಿಶ್ವ ಪಥ.** ಆ ಒಬ್ಬರ ಉದಯ ಮಾತ್ರವಲ್ಲ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ; ಸಮನ್ವಯಗೊಳ್ಳುವುದು. ಸಂಕುಚಿತ ಮತದ ಆಂಶಿಕ ದೃಷ್ಟಿ ಅಲ್ಲ; ಭೌತಿಕ ಪಾರಮಾರ್ಥಿಕ ಎಂಬ ಭಿನ್ನದೃಷ್ಟಿ ಅಲ್ಲ; ಎಲ್ಲವನ್ನು ಭಗವದ್ ದೃಷ್ಟಿಯಿಂದ ಕಾಣುವ **ಪೂರ್ಣದೃಷ್ಟಿ.**

**ಕುವೆಂಪು**

## *Gospel of Universal Man*

Every Child, at birth, is the universal man. But, as it grows, we turn it into "a petty man". It should be the function of education to turn it again into the enlightened "universal man".

The Religion of Humanity, the Universal Path, the Welfare of All, Reconciliation, the Integral Vision- these ***five mantras*** should become View of the Future. In other words, what we want henceforth is not this religion or that religion, but the Religion of Humanity ; not this path or that path, but the Universal Path ; not the well-being of this individual or that individual, but the Welfare of All ; not turning away and breaking off from one another, but reconciling and uniting in concord and harmony ; and, above all, not the partial view of a narrow creed, not the dual outlook of the material and the spiritual, but the Integral Vision of seeing all things with the eye of the Divine.

***Kuvempu***



# ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸಗಂಗೋತ್ರಿ
ಮೈಸೂರು - 570 006

**ಎಂ.ಪಿ.ಪಿ.**
**ಕನ್ನಡ ಸಾಹಿತ್ಯ**

| ಸಂಚಿಕೆಗಳು | ವಿಷಯಗಳು | |
|---|---|---|
| 1 | ಕನ್ನಡ ಸಾಹಿತ್ಯ ಚರಿತ್ರೆ<br>ಹಳಗನ್ನಡ ಸಾಹಿತ್ಯ<br>ಚಂಪೂ ಸಾಹಿತ್ಯ - ವಚನ ಸಾಹಿತ್ಯ | ಘಟಕ - 1 ಕನ್ನಡ ಸಾಹಿತ್ಯದ ಪ್ರಾಚೀನತೆ<br>ಘಟಕ - 2 ೧ನೇ ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ರುದ್ರಭಟ್ಟ, ಜನ್ನ ಮತ್ತು ಆಂಡಯ್ಯ<br>ಘಟಕ - 3 ವಚನ ಸಾಹಿತ್ಯ : ಹಿನ್ನೆಲೆ, ಉಗಮ, ಬೆಳವಣಿಗೆ, ಲಕ್ಷಣ<br>ಘಟಕ - 4 ಪ್ರಮುಖ ವಚನಕಾರರು, ವಚನ ಸಾಹಿತ್ಯದ ಕೊಡುಗೆ |
| 2 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ರಗಳೆ : ಸ್ವರೂಪ, ಪ್ರಭೇದಗಳು<br>ಘಟಕ - 2 ಕವಿ ಹರಿಹರ ಮತ್ತು ಆತನ ಕೃತಿಗಳು<br>ಘಟಕ - 3 ಷಟ್ಪದಿ ಸಾಹಿತ್ಯ - ಪರಿಚಯ, ರಾಘವಾಂಕ : ಕವಿ, ಕೃತಿಗಳು<br>ಘಟಕ - 4 ಷಟ್ಪದಿ ಕವಿಗಳು : ಕುಮಾರವ್ಯಾಸ, ಚಾಮರಸ, ಕುಮಾರವಾಲ್ಮೀಕಿ |
| 3 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ದಾಸ ಸಾಹಿತ್ಯ : ಶ್ರೀಪಾದರಾಜರು, ಪುರಂದರ, ಕನಕ, ಜಗನ್ನಾಥದಾಸರು ಮೊದಲಾದವರ<br>ಘಟಕ - 2 ತ್ರಿಪದಿ ಸಾಹಿತ್ಯ : ಪರಿಚಯ, ಸರ್ವಜ್ಞ ಕವಿ<br>ಘಟಕ - 3 ಸಾಂಗತ್ಯ ಸಾಹಿತ್ಯ - ೧ : ದೇಪರಾಜ, ಶಿಶುಮಾಯಣ, ನಿಜಗುಣಶಿವಯೋಗಿ, ಕನಕದಾಸರು<br>ಘಟಕ - 4 ಸಾಂಗತ್ಯ ಸಾಹಿತ್ಯ - ೨ : ನಂಜುಂಡ ಕವಿ, ರತ್ನಾಕರವರ್ಣಿ, ಸಂಚಿಯ ಹೊನ್ನಮ್ಮ |
| 4 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಹೊಸಗನ್ನಡದ ಅರುಣೋದಯ : ಭಾಗ - ೧<br>ಘಟಕ - 2 ಹೊಸಗನ್ನಡ ಅರುಣೋದಯ : ಭಾಗ - ೨<br>ಘಟಕ - 3 ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯ<br>ಘಟಕ - 4 ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ |
| 5 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಭಾವಗೀತೆ, ಕಾದಂಬರಿ<br>ಘಟಕ - 2 ಸಣ್ಣ ಕಥೆ : ಸ್ವರೂಪ, ಲಕ್ಷಣ ಮತ್ತು ಇತಿಹಾಸ<br>ಘಟಕ - 3 ನಾಟಕ : ವಸ್ತು, ಸಂವಿಧಾನ, ರಂಗಭೂಮಿ, ನಾಟಕ ಪರಂಪರೆ<br>ಘಟಕ - 4 ಪ್ರಬಂಧ, ವಿಮರ್ಶೆ |
| 6 | ಛಂದಸ್ಸು | ಘಟಕ - 1 ಲಘು, ಯತಿ, ಪ್ರಾಸ, ಪಾದ, ಮಾತ್ರಾಗಣ ಸ್ವರೂಪ, ಕನ್ನಡ ಛಂದೋಗ್ರಂಥಗಳ ಪರಿಚಯ<br>ಘಟಕ - 2 ವರ್ಣವೃತ್ತಗಳು, ಖ್ಯಾತ ಕರ್ಣಾಟಕಗಳು, ಮಾತ್ರಾವೃತ್ತಗಳು, ಕಂದ, ರಗಳೆ, ಅಂಶವೃತ್ತಗಳು<br>ಘಟಕ - 3 ಹೊಸಗನ್ನಡ ಛಂದಸ್ಸು - ೧ : ಗಣವಿನ್ಯಾಸ, ಪ್ರಯೋಗಗಳು, ಸ್ವರಾಘಾತ, ಗಣಪರಿವೃತ್ತಿ<br>ಘಟಕ - 4 ಹೊಸಗನ್ನಡ ಛಂದಸ್ಸು - ೨ : ಮಾತ್ರೆ, ಮುಡಿ, ಪದ್ಯಗಣ |
| 7 | ಭಾರತೀಯ ಕಾವ್ಯಮೀಮಾಂಸೆ | ಘಟಕ - 1 ಮೀಮಾಂಸೆಯ ಉಗಮ, ಕಾವ್ಯದ ಆಕರ, ಪರಿಕರ, ಸಹೃದಯ, ಕಾವ್ಯ ಲಕ್ಷಣ ಇತ್ಯಾದಿ<br>ಘಟಕ - 2 ಪ್ರಸ್ಥಾನಗಳು : ಅಲಂಕಾರ, ರೀತಿ, ಧ್ವನಿ, ಔಚಿತ್ಯ, ಮೀಮಾಂಸಕರು<br>ಘಟಕ - 3 ರಸಸಿದ್ಧಾಂತ, ರಸಪ್ರಭೇದಗಳು<br>ಘಟಕ - 4 ಧ್ವನಿ ಸಿದ್ಧಾಂತ, ಧ್ವನಿ ಪ್ರಭೇದಗಳು<br>ಘಟಕ - 5 ಔಚಿತ್ಯ ತತ್ವ |
| 8 | ಸಾಹಿತ್ಯ ವಿಮರ್ಶೆ | ಘಟಕ - 1 ಪಾಶ್ಚಿಮಾತ್ಯ ವಿಮರ್ಶಕರ ಪರಿಚಯ, ವಿಮರ್ಶೆಯ ಪರಿಚಯ<br>ಘಟಕ - 2 ವಿಮರ್ಶೆಯ ಸ್ವರೂಪ<br>ಘಟಕ - 3 ವಿಮರ್ಶೆಯ ವಿಧಾನಗಳು - 1<br>ಘಟಕ - 4 ವಿಮರ್ಶೆಯ ವಿಧಾನಗಳು - 2 |
| 9 | ಕನ್ನಡ ಭಾಷೆಯ ಚರಿತ್ರೆ | ಘಟಕ - 1 ಭಾಷೆ : ಸ್ವರೂಪ, ಲಕ್ಷಣ, ವರ್ಗೀಕರಣ, ದ್ರಾವಿಡ ಭಾಷೆಗಳು, ದ್ರಾವಿಡ ಭಾಷಾವರ್ಗೀಕರಣ<br>ಘಟಕ - 2 ಕನ್ನಡ ಕರ್ಣಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ - ಸಂಬಂಧ, ಪ್ರಾಂತ ಭೇದಗಳು ಇತ್ಯಾದಿ<br>ಘಟಕ - 3 ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಅವ್ಯಯ<br>ಘಟಕ - 4 ಶಬ್ದಕೋಶ ಬೆಳವಣಿಗೆ, ದೇಶ್ಯ - ಅನ್ಯದೇಶ್ಯ ಪದಗಳು |
| 10 | ವ್ಯಾಕರಣ | ಘಟಕ - 1 ಶಬ್ದಮಣಿದರ್ಪಣಂ : ವ್ಯಾಕರಣ ಪರಿಚಯ, ವರ್ಣಮಾಲೆ<br>ಘಟಕ - 2 ಸಂಧಿಪ್ರಕರಣ, ನಾಮಪ್ರಕರಣ<br>ಘಟಕ - 3 ಸಮಾಸ ಪ್ರಕರಣ, ತದ್ಧಿತ ಪ್ರಕರಣ<br>ಘಟಕ - 4 ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಪ್ರಕರಣ |

**ಸಂಚಿಕೆ - 10**

## ವ್ಯಾಕರಣ

## ಪಠ್ಯಕ್ರಮ ವಿನ್ಯಾಸ ಮತ್ತು ಸಂಪಾದಕ ಮಂಡಳಿ



## ಪಠ್ಯಕ್ರಮ ನಿರೂಪಕರು — ಸಂಚಿಕೆ - 10

**ಡಾ. ಎಂ. ರಾಮಕೃಷ್ಣ** — ಘಟಕ 1, 2, 3 ಮತ್ತು 4
ಕನ್ನಡ ಪ್ರಾಧ್ಯಾಪಕರು (ನಿವೃತ್ತ)
ಲಲಿತ ಕಲೆಗಳ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

## ಪ್ರಕಾಶಕರು

**ಶ್ರೀ ವಿ. ರಾಮಣ್ಣ**
ಕುಲಸಚಿವರು (ಆಡಳಿತ)

ಕ.ರಾ.ಮು.ವಿ.,ಯ ಶೈಕ್ಷಣಿಕ ವಿಭಾಗದಿಂದ ಸಿದ್ಧಪಡಿಸಲಾಗಿದೆ.



ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಕೋರ್ಸ್‌ಗಳ ಹೆಚ್ಚಿನ ವಿವರಗಳಿಗೆ
ವಿಶ್ವವಿದ್ಯಾನಿಲಯದ ಕಾರ್ಯಾಲಯ, ಮಾನಸಗಂಗೋತ್ರಿ, ಮೈಸೂರು - 570 006 ಇಲ್ಲಿಂದ ಪಡೆಯಬಹುದು.

ಪ್ರಿಯ ವಿದ್ಯಾರ್ಥಿ,

ಕನ್ನಡ ಎಂ.ಎ., ವ್ಯಾಸಂಗಕ್ಕಾಗಿ ನಮ್ಮ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆದಿರುವ ತಮ್ಮನ್ನು ನಮ್ಮ ಕನ್ನಡ ವಿಭಾಗದ ಅಧ್ಯಾಪಕ ವೃಂದ ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.

ತಮ್ಮ ಕೈಯಲ್ಲಿರುವ ಈ ಸಾಮಗ್ರಿಯು ನಮ್ಮಲ್ಲಿ 'ಮುಕ್ತ' ಪದ್ಧತಿಯಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆಂದೇ ವಿಶೇಷವಾಗಿ ಸಿದ್ಧಪಡಿಸಿದುದಾಗಿದೆ. ತಾವು ತಮ್ಮ ಸ್ವಂತ ಇಚ್ಛೆ ಮತ್ತು ಪರಿಶ್ರಮದಿಂದ ಕನ್ನಡ ಸಾಹಿತ್ಯವನ್ನು ವ್ಯಾಪಕವಾಗಿ ಓದಿಕೊಂಡಿದ್ದೀರಿ ಮತ್ತು ಅಭಿಮಾನವನ್ನೂ ಬೆಳೆಸಿಕೊಂಡಿದ್ದೀರಿ ಎಂದು ಭಾವಿಸಿದ್ದೇವೆ. ಇದನ್ನು ತುಂಬು ಮನಸ್ಸಿನಿಂದ ನಾವು ಗೌರವಿಸುತ್ತೇವೆ ಕೂಡ. ಈ ಬಗೆಯಲ್ಲಿ ತಾವು ಓದುವಿಕೆಯನ್ನು ಮಾಡಿದವರಾಗಿದ್ದರೂ ಅದು ಕೆಲವೊಮ್ಮೆ ಒಂದು ಶಿಸ್ತಿಗೆ ಒಳಪಟ್ಟ ಅಧ್ಯಯನವಾಗದೆಯೂ ಇರಬಹುದು. ಇಂತಹ ಸ್ಥಿತಿಯಿಂದ ನಿರ್ದಿಷ್ಟ ಶಿಸ್ತಿನ ಪದ್ಧತಿಗೆ ಪ್ರವೇಶ ಪಡೆದಾಗ ತಮಗೆ ಕೆಲಮಟ್ಟಿಗೆ ಶೈಕ್ಷಣಿಕ ತೊಡಕು (ಕೆಲವರಿಗಾದರೂ) ಎದುರಾಗಬಹುದು. ಈ ಕೊರತೆಯನ್ನು ನೀಗುವ ಸಲುವಾಗಿ ***'ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ'*** **[ *Master's Preparatory Programe (MPP)* ]** ವನ್ನು ಮುಕ್ತಪದ್ಧತಿಯ ವಿದ್ಯಾರ್ಥಿಗಳಿಗೆ ರೂಪಿಸಲಾಗಿದೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಲ್ಲಿ ಒಬ್ಬ ವಿದ್ಯಾರ್ಥಿಯು (ಬಿ.ಎ., ಪದವಿಯವರೆಗೆ) ವ್ಯಾಸಂಗ ಮಾಡಿರುವ ವಸ್ತು-ವಿಷಯಗಳ ಸ್ಥೂಲ ಮಾಹಿತಿಯನ್ನು ಈ (ಎಂಪಿಪಿ) ಸಾಮಗ್ರಿಯಲ್ಲಿ ಅಳವಡಿಸಲಾಗಿದೆ. ಮುಕ್ತ ಪದ್ಧತಿಯಲ್ಲಿ ಪ್ರವೇಶ ಪಡೆದ ತಮಗೆ ಈ ಸಾಮಗ್ರಿಯು ಕನ್ನಡ ಎಂ.ಎ. ವ್ಯಾಸಂಗಕ್ಕೆ ಸೂಕ್ತ ತಳಹದಿಯನ್ನು ನೀಡುವುದರೊಂದಿಗೆ ಆತ್ಮವಿಶ್ವಾಸವನ್ನು ಮೂಡಿಸುತ್ತದೆ.

ಕನ್ನಡ ಸಾಹಿತ್ಯ ಕುರಿತ 10 ಸಂಚಿಕೆಗಳಲ್ಲಿ ಇದು 10 ನೆಯದು. ಇದರಲ್ಲಿ ಹಳಗನ್ನಡ ವ್ಯಾಕರಣ ಕೃತಿಯಾದ ಶಬ್ದಮಣಿದರ್ಪಣಂ ವಿವರಿಸಲ್ಪಟಿದೆ. ವ್ಯಾಕರಣದ ಸಮಾನ್ಯ ಪರಿಚಯ, ಅಕ್ಷರ ಪ್ರಕರಣ, ಸಂಧಿಪ್ರಕರಣ, ಸಮಾಸ ಪ್ರಕರಣ, ತದ್ಧಿತ ಪ್ರಕರಣ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಪ್ರಕರಣ ಮೊದಲಾದುವನ್ನು ಕುರಿತ ವಿವರಗಳು ಇಲ್ಲಿವೆ.

ಈ ಸಾಮಗ್ರಿಯಲ್ಲಿನ ವಿಷಯಗಳನ್ನು ಸೂಕ್ಷ್ಮವಾಗಿ ತಾವು ಓದಬೇಕು, ಒಂದೊಂದು ಅಂಕಗಳಿಗೆ ಉತ್ತರಿಸಬಹುದಾದ 'ವಸ್ತುನಿಷ್ಠ' (Objective Type) ಪ್ರಶ್ನೆಗಳನ್ನು ತಾವೇ ಸಿದ್ಧಪಡಿಸಿಕೊಂಡು ಉತ್ತರಗಳನ್ನು ಕಂಡುಕೊಂಡು ಈ ಸಾಮಗ್ರಿ ಕುರಿತ ಪರೀಕ್ಷೆಗೆ ಸಿದ್ಧವಾಗಬೇಕು ಎಂದು ಸೂಚಿಸುತ್ತ; ಈ ಸಾಮಗ್ರಿಯ ಓದು ತಮಗೆ ಉದ್ದಿಷ್ಟಫಲವನ್ನು ನೀಡಲಿ ಎಂದು ಆಶಿಸುತ್ತೇವೆ.

ಅಧ್ಯಾಪಕ ವೃಂದದ ಪರವಾಗಿ
ತಮ್ಮ ವಿಶ್ವಾಸಿ
**ಡಾ. ಡಿ.ಟಿ. ಬಸವರಾಜ್**
ಅಧ್ಯಕ್ಷರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

# ಸಂಚಿಕೆ -10
# ವ್ಯಾಕರಣ

## ಘಟಕ - 1
## ವ್ಯಾಕರಣ ಪರಿಚಯ, ವರ್ಣಮಾಲೆ

ಪರಿವಿಡಿ

## 1.0. ಘಟಕದ ಉದ್ದೇಶ

ವ್ಯಾಕರಣ ಎಂಬುದು ಭಾಷೆಯ ಅಧ್ಯಯನದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿದೆ. ಭಾಷೆಯ ಬೆಳವಣಿಗೆಯಲ್ಲಿ ವ್ಯಾಕರಣ ಮಹತ್ತರವಾದ ಪಾತ್ರವನ್ನು ವಹಿಸಿದೆ. ಆದ್ದರಿಂದ ವ್ಯಾಕರಣದ ಕೆಲವು ಮುಖ್ಯವಾದ ಅಂಶಗಳನ್ನು ಈ ಘಟಕದಲ್ಲಿ ವಿವರಿಸಲಾಗಿದೆ. ಹಳಗನ್ನಡ ವ್ಯಾಕರಣಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಕೇಶಿರಾಜನ ಶಬ್ದಮಣಿದರ್ಪಣವನ್ನು ಆಧಾರವನ್ನಾಗಿ ಇಟ್ಟುಕೊಂಡು ಭಾಷೆಗೆ ಸಂಬಂಧಿಸಿದಂತೆ ವರ್ಣಮಾಲೆ, ಸಂಧಿ, ನಾಮಪದ ಮುಂತಾದ ಪ್ರಕರಣ [ಅಧ್ಯಾಯ] ಗಳನ್ನು ವಿವರಿಸುವುದು ಈ ಘಟಕದ ಉದ್ದೇಶವಾಗಿದೆ.

## 1.1 ಪೀಠಿಕೆ

ಭಾಷೆಯನ್ನು ಕಲಿಯಲು ಮತ್ತು ಕಲಿಸಲು ವ್ಯಾಕರಣವು ಬೇಕೇಬೇಕೆ ಎಂಬ ವಿಷಯದ ಬಗ್ಗೆ ಇತ್ತೀಚೆಗೆ ಪತ್ರಿಕೆಗಳಲ್ಲಿ ಚರ್ಚೆ ನಡೆಯಿತು. ಅದನ್ನು ನಿಮ್ಮಲ್ಲಿ ಕೆಲವರಾದರೂ ಓದಿರುತ್ತೀರಿ. ಹಾಗೆ ನಡೆದ ಚರ್ಚೆಯಲ್ಲಿ ತಿಳಿದು ಬಂದ ಅನೇಕ ಫಲಿತಗಳಲ್ಲಿ ಕೆಲವಾದರೂ ಗಂಭೀರವಾದ ಮಾರ್ಗದರ್ಶೀ ಸೂತ್ರಗಳು ಲಭಿಸಿವೆ ಎನ್ನಬಹುದು. ಪ್ರಪಂಚದಲ್ಲಿ ಮನುಷ್ಯನು, ಭಾಷೆಯ ಬಳಕೆಯಿಂದಾಗಿ ಪ್ರಾಣಿಗಳಲ್ಲೇ ಸರ್ವ ಶ್ರೇಷ್ಠನಾಗಿ ಬೆಳೆದಿದ್ದಾನೆ. ಪಕ್ಷಿ ಪ್ರಾಣಿಗಳು ಅನೇಕ ರೀತಿಯ ಧ್ವನಿ ಸಂಕೇತಗಳನ್ನು ಹೊರಡಿಸುತ್ತವೆ. ಆದರೆ ಅವುಗಳು ಮನುಷ್ಯನಂತೆ ಸೂಕ್ಷ್ಮಾತಿ ಸೂಕ್ಷ್ಮ ವಿಚಾರಗಳನ್ನು, ಭಾವನೆಗಳನ್ನು ಪ್ರಕಟಿಸಲಾರವು. ಮನುಷ್ಯನು ಮಾತನಾಡಲು ಮತ್ತು ಬರೆಯಲು ಕಲಿತವನಾದುದರಿಂದಲೇ ನಾಗರಿಕತೆ ಮತ್ತು ಸಂಸ್ಕೃತಿ ಬೆಳೆಯಲು ಸಾಧ್ಯವಾಯಿತು. ಮನುಷ್ಯನ ಬುದ್ಧಿಶಕ್ತಿ ಕೂಡ ಬೆಳೆಯಲು ಭಾಷೆಯು ಸಹಾಯ ಮಾಡಿತು. ಮನುಷ್ಯರ ನಡುವೆ ಅನ್ಯೋನ್ಯವಾದ ಮಾನವ ಸಂಬಂಧಗಳನ್ನು ರೂಪಿಸಿರುವ ಭಾಷೆಯು ಮನುಷ್ಯನಿಗೆ ತನ್ನ ಉಸಿರಾಟದಷ್ಟೇ ಸಹಜವೂ ಆಗಿದೆ. ಭಾರತೀಯ ಸಾಹಿತ್ಯ ಲೋಕದಲ್ಲಿ ವ್ಯಾಕರಣಶಾಸ್ತ್ರಕ್ಕೆ ಹೆಚ್ಚು ಮನ್ನಣೆ ಇದೆ. ಅದು ವೇದಾಂಗಗಳಲ್ಲಿ ಒಂದು ಎಂದು ಪರಿಗಣಿಗಸಲ್ಪಟ್ಟಿದೆ. ಸಂಸ್ಕೃತ ಸಾಹಿತ್ಯದಲ್ಲಿ ಪಾಣಿನಿ, ಅಮರ, ಜೈನೇಂದ್ರ ಮುಂತಾದವರು ಮುಖ್ಯರಾಗಿದ್ದಾರೆ. ಯಾಸ್ಕಾಚಾರ್ಯರು "ನಿರುಕ್ತ" ದ ಕರ್ತೃವಾಗಿದ್ದಾರೆ. ವಿಷಯವನ್ನು ಅತ್ಯಂತ ಶಾಸ್ತ್ರೀಯವಾದ ರೀತಿಯಲ್ಲಿ ಚರ್ಚಿಸಿದ್ದಾರೆ. ಪಾಣಿನಿಯ ಅಷ್ಟಾಧ್ಯಾಯಿಯು ಲೌಕಿಕ ಸಂಸ್ಕೃತ ಭಾಷೆಗೆ ಉತ್ತಮವಾದ ಬುನಾದಿಯನ್ನು ಹಾಕಿಕೊಟ್ಟಿತು. ಅವನ ನಂತರ ಅನೇಕ ವೈಯಾಕರಣರು ಪರಂಪರೆಯನ್ನು ವೃದ್ಧಿಸಿದ್ದಾರೆ. ಸಂಸ್ಕೃತದಲ್ಲಿ ಜೈನ ಪರಂಪರೆಯ ವ್ಯಾಕರಣ ಮತ್ತು ಬೌದ್ಧ ಪರಂಪರೆಯ ವ್ಯಾಕರಣಗಳಿವೆ. ಸಂಸ್ಕೃತದಲ್ಲಿ ವ್ಯಾಕರಣ ಕೃತಿಗಳಿರುವಂತೆ ಕನ್ನಡದಲ್ಲಿಯೂ ವ್ಯಾಕರಣ ಗ್ರಂಥಗಳಿವೆ. ಎಲ್ಲ ಗ್ರಂಥಸ್ಥ ಭಾಷೆಗಳಲ್ಲಿಯೂ ವ್ಯಾಕರಣಗಳು ಇರುತ್ತವೆ. ಪದಗಳ ವಿಕರಣವನ್ನು ವ್ಯಾಕರಣವು ತಿಳಿಸುತ್ತದೆ. ವಿಕರಣ ಎಂದರೆ ಬಿಡಿಸಿ ತೋರಿಸುವುದು ಎಂದು ಅರ್ಥ. ಭಾಷೆಯು ಬೆಳೆದು ನಿಂತ ನಂತರ ಅದರ ಅಧ್ಯಯನವು ನಾನಾ ರೀತಿಯಲ್ಲಿ ನಡೆಯುತ್ತದೆ. ಒಟ್ಟಾರೆ ವ್ಯಾಕರಣವು ಭಾಷೆಯ ಅಧ್ಯಯನಕ್ಕೆ ಅನಿವಾರ್ಯವಾದುದು. ಅದನ್ನು ವಿವರಿಸಲು, ನಿರೂಪಿಸಲು ವಿಶೇಷವಾದ ಸಾಮರ್ಥ್ಯವು ಇರಬೇಕು. ಹಾಗೆ ಇದ್ದರೆ ವ್ಯಾಕರಣವು ನೀರಸವಾಗಿರುವುದಿಲ್ಲ. ಸಂಶೋಧನೆಯ ಕುತೂಹಲವು ಮನಸ್ಸನ್ನು ಆಕರ್ಷಿಸುತ್ತದೆ. ಆಧುನಿಕರು

ಬೇರೆ ಯಾವುದೋ ನಿಲುವಿನಿಂದ ವಾದ ಮಾಡಿರಬಹುದು. ಕೆಲವರು ವ್ಯಾಕರಣದ ಬಗ್ಗೆ ಸೂಕ್ತವಾದ ಅರ್ಥ ನಿರೂಪಣೆಯನ್ನು ತಿಳಿಯದೆ ಇರಬಹುದು. ಆದ್ದರಿಂದ ಏಕಮುಖ ದೃಷ್ಟಿಯಿಂದ ವ್ಯಾಕರಣಶಾಸ್ತ್ರದ ಉಪಯುಕ್ತತೆಯನ್ನು ಕಡೆಗಣಿಸುವುದು ಸರಿಯಾದುದಲ್ಲ. ಕಾಳಿದಾಸನ ಒಂದು ನುಡಿ ಇಲ್ಲಿ ಉಲ್ಲೇಖನಾರ್ಹವಾಗಿದೆ.

'ಪುರಾಣಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಕಾವ್ಯಂ ನವಮಿತ್ಯವದ್ಯಂ'

ಹಳೆಯದು, ಪರಂಪರಾಗತವಾದುದು ಎಂಬ ಕಾರಣದಿಂದ ಮಾತ್ರವೇ ಹಳೆಯದನ್ನು ಉತ್ತಮವಾದುದು ಎಂದು ಹೇಳುವ ಅಗತ್ಯವಿಲ್ಲ. ಹಾಗೆಯೇ ಇತ್ತೀಚಿನದು ಎಂದ ಮಾತ್ರಕ್ಕೆ ಅದು ಉತ್ತಮವಾದುದಾಗಿರಲಾರದು ಎಂದು ಭಾವಿಸಬೇಕಾಗಿಲ್ಲ. ಎಲ್ಲವನ್ನೂ ಸರಿಯಾಗಿ ಪರೀಕ್ಷಿಸಿ ನೋಡಿ ತೀರ್ಮಾನಕ್ಕೆ ಬರಬೇಕಾಗುತ್ತದೆ. ಈ ವಾದವನ್ನು ವ್ಯಾಕರಣ ಶಾಸ್ತ್ರಕ್ಕೂ ಅನ್ವಯಿಸಿ ನೋಡಬಹುದು. ವೇದಾಂಗಗಳಲ್ಲಿ ಒಂದು ಎನ್ನುವ ಕಾರಣದಿಂದಲೇ ಅದು ಶ್ರೇಷ್ಠವೆಂದು ಹೇಳಬೇಕಾಗಿಲ್ಲ. ಅದರ ಉಪಯುಕ್ತತೆಯನ್ನು ಕಂಡ ನಂತರ ಅದನ್ನು ಪುರಸ್ಕರಿಸದೆ ಇರುವುದು ಸರಿಯಾದ ಕ್ರಮವಲ್ಲ. ಆದ್ದರಿಂದ ವ್ಯಾಕರಣ ಶಾಸ್ತ್ರವು ಸರ್ವಕಾಲಕ್ಕೂ ಭಾಷೆಯ ಅಭ್ಯಾಸಿಗಳಿಗೆ ಉಪಾದೇಯವಾದುದು.

## 1.2. ಹಳಗನ್ನಡ ವ್ಯಾಕರಣಗಳು

ಕಾಲದ ಪ್ರವಾಹವು ಯಾವುದನ್ನೂ ಸ್ಥಾಯಿಯಾಗಿ ಇರಲು ಬಿಡುವುದಿಲ್ಲ. ಕಾಲದಿಂದ ಕಾಲಕ್ಕೆ ಬದಲಾವಣೆಗಳು ಉಂಟಾಗುವುದು ಅನಿವಾರ್ಯವಾದುದು. ಭಾಷೆಯೂ ಕೂಡ ಬದಲಾವಣೆಗೆ ಒಳಗಾಗುತ್ತದೆ. ನಾವು ಉಪಯೋಗಿಸುವ ಉಪಕರಣಗಳಲ್ಲಿ ಭಾಷೆಯೂ ಒಂದು. ಅದೂ ಕೂಡ ದೀರ್ಘಾವಧಿಯಲ್ಲಿ ಪರಿವರ್ತನೆಯನ್ನು ಹೊಂದುತ್ತದೆ. ಹಿಂದಿನ ಕಾಲದ ಕಾವ್ಯಗಳು ಮತ್ತು ಹೊಸಗನ್ನಡದ ರಚನೆಗಳು ಒಂದೇ ರೀತಿ ಇರುವುದಿಲ್ಲ. ಓದಿ ತಿಳಿಯುವವರಿಗೆ ಭಾಷೆಯಲ್ಲಿ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ. ಹಳಗನ್ನಡದ ಸ್ವರೂಪವನ್ನು ಕೆಲವು ವೈಯಾಕರಣರು ಬಹಳ ಹಿಂದೆಯೇ ವಿವೇಚಿಸಿದ್ದಾರೆ. ಎರಡನೆಯ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ ಮಂತಾದವರು ಇವರಲ್ಲಿ ಮುಖ್ಯರಾಗಿದ್ದಾರೆ.

ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಹಳ ಮುಖ್ಯವಾದುದು. ಏಕೆಂದರೆ ಆ ವೇಳೆಗೆ ಹಳಗನ್ನಡ ಕಾಲ ಮುಗಿದು ನಡುಗನ್ನಡದ ಕಾಲ ಪ್ರಾರಂಭವಾಗಿತ್ತು. ನಡುಗನ್ನಡದಲ್ಲಿ ಉಂಟಾಗುತ್ತಿದ್ದ ಬದಲಾವಣೆಗಳು ಕೆಲವರಿಗೆ ಅಸಮಾಧಾನವನ್ನು ಉಂಟುಮಾಡಿರಬಹುದು. ಸಾಮಾನ್ಯವಾಗಿ ವೈಯಾಕರಣರು ಭಾಷೆಯ ಶುದ್ಧಿಯ ಬಗ್ಗೆ ಆಸಕ್ತಿ ಹೊಂದಿರುತ್ತಾರೆ. ಹಳಗನ್ನಡ ಭಾಷಾ ಸ್ವರೂಪವು ಒಳ್ಳೆಯದಾಗಿತ್ತು ಎಂದು ತಿಳಿದ ವೈಯಾಕರಣರು ಹಳಗನ್ನಡದ ಪರಿಶುದ್ಧತೆಯನ್ನು ಕಾಪಾಡಬೇಕೆಂದು ಮನಸ್ಸು ಮಾಡಿದಂತೆ ತೋರುತ್ತದೆ. ಅಂತಹ ಸಂಧಿಕಾಲದಲ್ಲಿ ವೈಯಾಕರಣರ ಜವಾಬ್ದಾರಿಯೂ ಹೆಚ್ಚಾಗಿಯೇ ಇರುತ್ತದೆ. ಕೇಶಿರಾಜನು ಇತರರಿಗಿಂತ ಹೆಚ್ಚು ಜಾಗರೂಕನಾಗಿ ಪೊಲೀಸರ ಹಾಗೆ ತಪಾಸಣೆ ಮಾಡಿರುವುದು ಕಂಡುಬರುತ್ತದೆ. ಏನೇ ಆದರೂ ವೈಯಾಕರಣರು ಪ್ರಯೋಗ ಶರಣರೇ ಆಗಿರುತ್ತಾರೆ.

ನಾಗವರ್ಮನು ಕ್ರಿ.ಶ. 1042 ರಲ್ಲಿದ್ದವನು. ಆತನ "ಕಾವ್ಯಾವಲೋಕನ" ಎಂಬ ಗ್ರಂಥದ ಒಂದು ಭಾಗವಾದ "ಶಬ್ದಸ್ಮೃತಿ" ಎಂಬುದನ್ನು ಗಮನಿಸಬಹುದು. ಅದರಲ್ಲಿ ಸುಮಾರು 96 ಸೂತ್ರಗಳು ಕಂದ ಪದ್ಯರೂಪದಲ್ಲಿವೆ. ಹಳೆಯ ಕಾವ್ಯಗಳಿಂದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಕೇಶಿರಾಜನು ಕ್ರಿ.ಶ. 1260 ರಲ್ಲಿದ್ದವನು. ಆತನು ನಾಗವರ್ಮನಿಂದ ತುಂಬಾ ಉಪಕೃತನಾಗಿದ್ದಾನೆ. ಆತನ ಶಬ್ದಮಣಿದರ್ಪಣ ಎಂಬ ವ್ಯಾಕರಣ ಗ್ರಂಥವು ಒಂದು ಉತ್ತಮವಾದ ಶಾಸ್ತ್ರಕೃತಿ ಎನ್ನಿಸಿಕೊಂಡಿದೆ. ಇದರ ಸೂತ್ರಗಳೆಲ್ಲವೂ ಕಂದ ಪದ್ಯರೂಪದಲ್ಲಿವೆ. ಕೇಶಿರಾಜನು ಉದಾಹರಣೆ ಕೊಡುವಾಗ ಪೂರ್ವಕವಿ ಪ್ರಯೋಗಗಳನ್ನು ಕೊಟ್ಟಿದ್ದಾನೆ. ಒಂದೊಂದು ಸೂತ್ರಕ್ಕೂ ಗದ್ಯದಲ್ಲಿ ವಿವರಣೆ ಕೊಟ್ಟಿದ್ದಾನೆ. ಈ ವಿವರಣೆಯನ್ನು ಇತರರು ಬರೆದಿರಬಹುದೆ ಎಂಬ ಸಂಶಯವೂ ಇದೆ. ಕೇಶಿರಾಜನೇ ಬರೆದಿದ್ದರೂ ಬೇರೆಯವರು ಕೆಲವು ಬದಲಾವಣೆಗಳನ್ನು ಮಾಡಿರಬಹುದೇ ಎಂಬ ಅನುಮಾನವೂ ಇದೆ. ಉದಾಹರಣೆಗಳು ಪೂರ್ಣಪದ್ಯಗಳಾಗಿಲ್ಲ. ಹಿಂದಿನ ಕವಿಗಳಿಂದ ತೆಗೆದುಕೊಳ್ಳಲಾಗಿರುವ ಉದಾಹರಣೆಗಳು ಪದ್ಯಖಂಡಗಳಾಗಿವೆ. ಉದಾಹರಣೆಗಳ ಆಯ್ಕೆಯು ತುಂಬಾ ರಸಿಕತೆಯಿಂದ ಕೂಡಿದೆ. ಶಬ್ದಮಣಿದರ್ಪಣವು ಐಚ್ಛಿಕ ಕನ್ನಡವನ್ನು ತೆಗೆದುಕೊಂಡಿರುವವರಿಗೆ ಪಠ್ಯಗ್ರಂಥವಾಗಿದೆ. ಮುಕ್ತ ವಿಶ್ವವಿದ್ಯಾನಿಲಯದ ವಿಶೇಷ ನಿಯಮದ ಅಡಿಯಲ್ಲಿ ನೇರವಾಗಿ ಸ್ನಾತಕೋತ್ತರ ಕೋರ್ಸಿಗೆ ಸೇರಿರುವವರು ಶಬ್ದಮಣಿದರ್ಪಣದ ಬಗ್ಗೆ ತಿಳಿದಿರುವುದು ಉಪಯುಕ್ತವಾದುದು. ಕೇಶಿರಾಜನು ಕವಿಗಳ, ಪಂಡಿತರ ಮನೆತನದಲ್ಲಿ ಹುಟ್ಟಿದವನು. ಆತನು ತನ್ನನ್ನು 'ಕರ್ಣಾಟ ಲಕ್ಷಣ ಶಿಕ್ಷಾಚಾರ್ಯ' ನೆಂದು ಹೇಳಿಕೊಂಡಿದ್ದಾನೆ. ಆತನು 'ಚೋಳಪಾಲಕ ಚರಿತಂ', 'ಶ್ರೀ ಚಿತ್ರಮಾಲೆ', 'ಸುಭದ್ರಾಹರಣಂ', 'ಪ್ರಬೋಧ ಚಂದ್ರಂ' ಮತ್ತು 'ಕಿರಾತ' ಎಂಬ ಕೃತಿಗಳನ್ನು ರಚಿಸಿರುವುದು ತಿಳಿದುಬರುತ್ತದೆ.

ಭಟ್ಟಾಕಳಂಕನು [1604] ಬಹಳ ದೊಡ್ಡ ವಿದ್ವಾಂಸನಾಗಿದ್ದನು. ಈತನ ವೈಶಿಷ್ಟ್ಯವೆಂದರೆ ಕನ್ನಡದ ವ್ಯಾಕರಣವನ್ನು ಸಂಸ್ಕೃತ ಭಾಷೆಯಲ್ಲಿ ಬರೆದಿರುವುದು ಆತನ ಗ್ರಂಥದ ಹೆಸರು ಶಬ್ದಾನು ಶಾಸನ. ಪ್ರತಿಯೊಂದು ಸೂತ್ರಕ್ಕೂ 'ಭಾಷಾಮಂಜರಿ' ಎಂಬ ವೃತ್ತಿಯನ್ನು (ವಿವರಣೆ) 'ಮಂಜರಿ ಮಕರಂದ' ಎಂಬ ದೀರ್ಘವಾದ ವ್ಯಾಖ್ಯಾನವನ್ನೂ ಬರೆದಿದ್ದಾನೆ. ಈತನು ತನ್ನ ಹಿಂದಿನವರಿಂದ ಉಪಕೃತನಾಗಿರಬಹುದು. ಸಂಸ್ಕೃತದ ವೈಯಾಕರಣರ ಪ್ರಭಾವಕ್ಕೆ ಈತನು ಒಳಗಾಗಿದ್ದಾನೆ. ಈ ದೊಡ್ಡ ವೈಯಾಕರಣರ ಜೊತೆಗೆ ಕವಿರಾಜಮಾರ್ಗಕಾರನನ್ನೂ ಗಮನಿಸಬಹುದು. ಆತನು ತನ್ನ ಕೃತಿಯಲ್ಲಿ [ಸುಮಾರು 850] ಪ್ರಾಸಂಗಿಕವಾಗಿ ಕೆಲವು ವ್ಯಾಕರಣ ವಿಚಾರಗಳನ್ನು ಪ್ರಸ್ತಾಪಿಸಿದ್ದಾನೆ.

## 1.3. ಹೊಸಗನ್ನಡ ವ್ಯಾಕರಣಗಳ ವಿಷಯ

ಭಾರತಕ್ಕೆ ಬ್ರಿಟಿಷರು ಬಂದಾಗ ಕ್ರೈಸ್ತಮತ ಪ್ರಚಾರಕರೂ ಅಧಿಕ ಸಂಖ್ಯೆಯಲ್ಲಿ ಬಂದರು. ಭಾರತೀಯರಿಗೆ ಧರ್ಮವೇ ತಿಳಿಯದು ಎಂಬ ಕಲ್ಪನೆಯಿಂದ ಜನರ ಆತ್ಮೋದ್ಧಾರ ಮಾಡುವ ಆದರ್ಶವನ್ನು ಇಟ್ಟುಕೊಂಡು ಬಂದ ಮತ ಪ್ರಚಾರಕರಲ್ಲಿ ಕೆಲವರು ಕನ್ನಡ ಸಾಹಿತ್ಯದ ಕಡೆ ಗಮನ ಹರಿಸಿದರು. ಅವರು ಸಹಜವಾಗಿಯೇ ಕನ್ನಡ ಭಾಷೆಯನ್ನು ಕಲಿತು ಮತ ಪ್ರಚಾರ ಮಾಡುವ ಉದ್ದೇಶ ಹೊಂದಿದ್ದರೂ ಅವರಿಂದ ಕನ್ನಡಕ್ಕೆ ಅಪ್ರತಿಮವಾದ ಸೇವೆಯೂ ಸಂದಿತು. ನಿಘಂಟುಗಳು, ಶಬ್ದಕೋಶಗಳು, ವ್ಯಾಕರಣಗಳು ಅವರ ಕಾಲದಲ್ಲಿ ಬೆಳಕು ಕಂಡುವು. ಆಶ್ಚರ್ಯವೆಂದರೆ ಸುಮಾರು

30 ಕ್ಕಿಂತಲೂ ಹೆಚ್ಚು ವ್ಯಾಕರಣ ಗ್ರಂಥಗಳು ಕ್ರೈಸ್ತ ಪಾದ್ರಿಗಳಿಂದಲೇ ಪ್ರಕಟಗೊಂಡಿವೆ. ಹೊಸಗನ್ನಡ ವ್ಯಾಕರಣವು ಹೊಸದಾದ ಪರಿಭಾಷೆಯೊಡನೆ ಬೆಳಕಿಗೆ ಬಂದಿವೆ. ವ್ಯಾಕರಣದ ಕ್ಷೇತ್ರದಲ್ಲಿ ಐತಿಹಾಸಿಕ ವ್ಯಾಕರಣ, ವರ್ಣನಾತ್ಮಕ ವ್ಯಾಕರಣ ತೌಲನಿಕ ವ್ಯಾಕರಣ ಹಾಗೂ ರೂಪಾಂತರ ವ್ಯಾಕರಣಗಳು ಎಂಬ ಪ್ರಕಾರಗಳಲ್ಲಿ ವ್ಯಾಕರಣ ಗ್ರಂಥಗಳು ಪ್ರಟಕವಾದುವು. ಹೆಚ್ಚಿನ ಗ್ರಂಥಗಳಲ್ಲಿ ಶಬ್ದ ವಿಚಾರ, ವಾಕ್ಯರಚನಾ ಪದ್ಧತಿಗೆ ಹೆಚ್ಚು ಪ್ರಾಶಸ್ತ್ಯದೊರತಿದೆ. ಸರಳವಾದ ಶೈಲಿಯಲ್ಲಿ ಸಾಮಾನ್ಯರೂ ಓದಿ ಅರ್ಥಮಾಡಿಕೊಳ್ಳಬಹುದಾದ ರೀತಿಯಲ್ಲಿ ವ್ಯಾಕರಣ ಗ್ರಂಥಗಳು ರಚಿತವಾದುವು. ಈ ವ್ಯಾಕರಣಗಳನ್ನು ಪಟ್ಟಿ ಮಾಡುವುದು ಪ್ರಯಾಸದ ಕೆಲಸ. ಏಕೆಂದರೆ ಕರ್ನಾಟಕದ ಅನೇಕ ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಹೊಸಗನ್ನಡ ವ್ಯಾಕರಣಗಳು ಬಹಳ ಸರಳವಾದ ರೀತಿಯಲ್ಲಿ ಪ್ರಕಟವಾಗಿವೆ. ಶಾಲಾ ಬಾಲಕರನ್ನು ಗಮನದಲ್ಲಿಟ್ಟುಕೊಂಡು ಈ ವ್ಯಾಕರಣಗಳು ರಚಿತವಾಗಿವೆ. ಕರ್ನಾಟಕ ಸರ್ಕಾರವು ಪ್ರೌಢಶಾಲೆಗಾಗಿ ವ್ಯಾಕರಣ ರಚಿಸಲು ಶಿ.ಚೆ. ನಂದೀಮಠರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿ, ತನ್ಮೂಲಕ ಪ್ರಕಟಿಸಿದ 'ಕನ್ನಡ ವ್ಯಾಕರಣ ದರ್ಪಣ' ಎನ್ನುವುದು ಒಂದು ಒಳ್ಳೆಯ ಗ್ರಂಥವಾಗಿದೆ. ಈ ತೆರನ ಗ್ರಂಥಗಳು ವಿವರಣಾತ್ಮಕವಾಗಿದ್ದು ಸಾಮಾನ್ಯರಿಗೂ ಅರ್ಥವಾಗುತ್ತವೆ. ಹಳಗನ್ನಡ ವ್ಯಾಕರಣಗಳ ಹಾಗೆ ಕಠಿಣವಾದ ರೀತಿಯಲ್ಲಿ ರಚಿತವಾಗಿಲ್ಲ. ಯಾವುದೇ ವಿಷಯವನ್ನು ಪಾರಿಭಾಷಿಕ ಶಬ್ದಗಳನ್ನು, ವಿಶಿಷ್ಟವಾದ ಶೈಲಿಯನ್ನು ಬಳಸಿಕೊಂಡು ಶಾಸ್ತ್ರೀಯ ದೃಷ್ಟಿಯನ್ನು ಪ್ರಧಾನವನ್ನಾಗಿಸಿ ಬರೆದಾಗ ಅಂತಹ ಗ್ರಂಥವನ್ನು ಓದಲು ತರಬೇತಿ, ಸಹಾಯ ಬೇಕಾಗುವುದು ನಿಜ. ಅದೇ ವಸ್ತುವನ್ನು ತೆಗೆದುಕೊಂಡು ಸಾಮಾನ್ಯರಿಗಾಗಿ ಸರಳವಾಗಿಯೂ ಬರೆಯಬಹುದು. ಯಾವ ರೀತಿಯ ಗ್ರಂಥ ಅಗತ್ಯ ಎಂಬುದನ್ನು ಸಂದರ್ಭವೆ ತಿಳಿಸಿಕೊಡುತ್ತದೆ. ಈ ಹೊಸಗನ್ನಡ ವ್ಯಾಕರಣಗಳು ಸಂಸ್ಕೃತವನ್ನು ಆದರ್ಶವನ್ನಾಗಿ ಇಟ್ಟುಕೊಂಡು ರಚಿತವಾಗಿಲ್ಲ. ಕನ್ನಡ ಭಾಷೆಯ ಜಾಯಮಾನವನ್ನು ಮುಂದಿಟ್ಟುಕೊಂಡು ರಚಿತವಾಗಿವೆ.

## 1.4. ವ್ಯಾಕರಣದ ಪ್ರಯೋಜನ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ, ಅದು 'ಪ್ರಯೋಜನಮನುದ್ದಿಶ್ಯ ನ ಮಂದೋಪಿ ಪ್ರವರ್ತತೇ' ಎಂಬುದು. ಹಾಗೆಂದರೆ 'ಯಾವ ಪ್ರಯೋಜನವು ಇಲ್ಲದ ಕೆಲಸವನ್ನು ದಡ್ಡನೂ ಕೂಡ ಮಾಡುವುದಿಲ್ಲ' ಎಂಬ ಅರ್ಥವಿದೆ. ದಡ್ಡನೇ ಮಾಡದಿರುವ ಕಾರ್ಯವನ್ನು ಬುದ್ಧಿವಂತನು ಮಾಡುತ್ತಾನೆಯೇ? ಎಂಬುದು ಇದರ ಸೂಚ್ಯವಾದ ಅರ್ಥವಾಗಿದೆ. ಭಾಷೆ ಬೆಳೆದ ಬಳಿಕ ವ್ಯಾಕರಣ ಹುಟ್ಟುತ್ತದೆ ಎಂಬುದು ನಿಮಗೂ ಗೊತ್ತು. ಭಾಷೆ ಇಲ್ಲದೆ ಸಾಹಿತ್ಯ, ವ್ಯಾಕರಣ ಇತ್ಯಾದಿಗಳು ಇರುವುದಿಲ್ಲ ಅಲ್ಲವೆ? ಭಾಷೆ ಮತ್ತು ವ್ಯಾಕರಣಗಳಿಗೆ ಇರುವಂತಹ ಸಂಬಂಧ ಬೇರೆ ಯಾವ ಶಾಸ್ತ್ರಗಳಿಗೂ ಇರುವುದಿಲ್ಲ. ಇದನ್ನು ಒಂದು ರೀತಿ ಜನನಿ ಪುತ್ರಿ ಸಂಬಂಧವೆಂದರೂ ನಡೆಯುತ್ತದೆ. ಮಗಳು ಅಥವಾ ಮಗ ಇಲ್ಲದೆ ಇದ್ದರೆ ಹೆಣ್ಣು ತಾಯಿಯಾಗುವುದಿಲ್ಲ. ಅಷ್ಟರ ಮಟ್ಟಿನ ಕೊರತೆ ಭಾಷೆಗೆ ಇರುತ್ತದೆ. [ಇದನ್ನು ಅತಿಶಯವಾಗಿ ತೆಗೆದುಕೊಳ್ಳಬಾರದು. ಇದು ಒಂದು ಉದಾಹರಣೆ ಅಷ್ಟೆ.] ಭಾಷೆ ಮತ್ತು ಸಾಹಿತ್ಯಗಳ ಸಂಬಂಧವನ್ನು ಪರಿಷ್ಕರಿಸುವ, ದೃಢಗೊಳಿಸುವ ಕೆಲಸವನ್ನು ಇದು ಮಾಡುತ್ತದೆ. ಮಗಳು ಇದ್ದಾಗ ಹೆಣ್ಣು ತನ್ನ ಜವಾಬ್ದಾರಿಯನ್ನು ಅರಿತುಕೊಳ್ಳುತ್ತಾಳೆ. ಮಗಳು ಒಳ್ಳೆಯ ರೀತಿಯಲ್ಲಿ ಬಾಳಬೇಕೆಂದು ಪ್ರಯತ್ನಿಸುತ್ತಾ ತಾಯ್ತನದ ಮಹತ್ವವನ್ನು ಹೆಚ್ಚಿಸಿಕೊಳ್ಳುತ್ತಾಳೆ. ಅವಳ ಬದುಕಿಗೆ ಒಂದು ಗಾಂಭೀರ್ಯ, ಸಂಯಮ ಇತ್ಯಾದಿಗಳು ಬಂದು ತುಂಬುತ್ತವೆ. ಆದ್ದರಿಂದ

ವ್ಯಾಕರಣವು ಮುಂದೆ ಇರುವಾಗ ಭಾಷೆ ಎಚ್ಚರಿಕೆಯಿಂದ ವರ್ತಿಸಬೇಕಾಗುತ್ತದೆ. ಮಗಳು ತಾಯಿಗೆ ತಿರುಮಂತ್ರ ಹೇಳದೆ ಇದ್ದರೂ ಪರೋಕ್ಷವಾಗಿ ತಾಯಿಯಾದ ಜೀವವು ಕೆಲವು ಮಾಗದರ್ಶೀ ನಿಯಮಗಳನ್ನು ತಾನಾಗಿಯೇ ಅನುಸರಿಸುತ್ತಾಳೆ. ಅವಳ ಸ್ವಚ್ಛಂದತೆಗೆ (ಇದ್ದರೆ) ಕಡಿವಾಣ ಬೀಳುತ್ತದೆ. ಮಗಳು ತನಗಿಂತ ಒಳ್ಳೆಯ ಹೆಸರು ಪಡೆಯಬೇಕೆಂದು ತಾನು ಜೀವನವನ್ನು ಪರಿಷ್ಕರಿಸಿಕೊಳ್ಳುತ್ತಾಳೆ. ಹಾಗೆಯೇ ವ್ಯಾಕರಣವನ್ನು ನೋಡಿದ ಕವಿಗಳು, ವಾಗ್ಮಿಗಳು, ಗಮಕಿಗಳು ಮುಂತಾದವರು ತಮ್ಮ ತಪ್ಪುಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ನನ್ನಿಂದ ಜನ್ಮತಾಳಿದ ಈ ಮಗ/ಮಗಳು ನನಗೇ ಪಾಠ ಹೇಳಬೇಕೇ ಎಂಬ ದಾರ್ಷ್ಟ್ಯದಿಂದ ವರ್ತಿಸುವ ತಾಯಿ ಆದರ್ಶವಾಗುವುದಿಲ್ಲ. ಹಾಗೆಯೇ ಭಾಷೆಯು ವ್ಯಾಕರಣವನ್ನು ಲೆಕ್ಕಿಸದೆ ಹೋಗಬಾರದು. ಕೆಲವು ಕವಿಗಳು ವ್ಯಾಕರಣ ನಮಗೆ ಮುಖ್ಯವಲ್ಲ ಎಂದು ಹಿಂದೆಯೂ ಹೇಳಿದ್ದಾರೆ. ಆದರೆ ಅವರು ವ್ಯಾಕರಣವನ್ನು ರಕ್ತಗತ ಮಾಡಿಕೊಂಡಿದ್ದವರು, ಉರುಹೊಡೆದವರಲ್ಲ. ಆದ್ದರಿಂದ ರಕ್ತಗತವಾದದ್ದು ಮರೆತು ಹೋಗುವುದಿಲ್ಲ.

ವ್ಯಾಕರಣವು ಉರು ಹೊಡೆಯುವುದಕ್ಕಾಗಿ ಮಾತ್ರ ನಮ್ಮ ಮುಂದೆ ಇರುವುದಲ್ಲ. ಅದು ಕೆಲವು ಮಾರ್ಗದರ್ಶೀ ಸೂತ್ರಗಳನ್ನು ನಮಗೆ ನೀಡುತ್ತದೆ. ವ್ಯಾಕರಣದ ಸಹಾಯದಿಂದ ಭಾಷೆಯನ್ನು ಕಲಿತವರು ಭಾಷಾಶುದ್ಧಿಯನ್ನು ಕಾಪಾಡಿಕೊಳ್ಳುತ್ತಾರೆ. ಅದು ಅಪ್ರಜ್ಞಾಸ್ತರದಿಂದಲೇ ನಿರ್ದೇಶಿಲ್ಪಡುತ್ತದೆ. ನಮಗೆ ಭಾಷೆಯ ಬಗ್ಗೆ ಪರಿಪೂರ್ಣವಾದ ತಿಳಿವಳಿಕೆ ಬರಬೇಕಾದರೆ ವ್ಯಾಕರಣದ ಜ್ಞಾನವು ಅನಿವಾರ್ಯ ಎಂದು ಹೇಳಬಹುದು. ಅನಿವಾರ್ಯ ಎಂಬ ಶಬ್ದ ಬೇಡವಾದರೆ ಬಿಡಿ, ಆವಶ್ಯಕ ಎಂದಾದರೂ ತಿಳಿಯಬೇಕು ಅಲ್ಲವೆ? ಇತರ ಭಾಷೆಯ ಜನರು ಕನ್ನಡವನ್ನು [ಉದಾಹರಣೆಗೆ] ಕಲಿಯಬೇಕಾದರೆ ವ್ಯಾಕರಣವನ್ನು ಬಿಟ್ಟು ಮುಂದುವರಿಯಲು ಸಾಧ್ಯವಿಲ್ಲ. ಒಬ್ಬರು ಅನ್ಯಭಾಷಿಕರು ಇತರರೊಡನೆ ಒಮ್ಮೆ ಪ್ರವಾಸ ಹೋಗಿದ್ದಾಗ ಒಂದು ಸ್ಥಳದಲ್ಲಿ ಕೆಲವು ಕೋತಿಗಳಿದ್ದುದನ್ನು ಅನ್ಯಭಾಷಿಕ ಮಿತ್ರರು ನೋಡಿದರು. ಕೋತಿಗಳು ಇವರ ಕಡೆಗೆ ಬರುತ್ತಿರುವುದು ಕಾಣಿಸಿತು. ಅವರು ಕೊಡಲೇ 'ಅರೆ, ಕೋತಿ ಬರ್ತಿದಾರೇ, ನೋಡ್ರಿ' ಎಂದು ಕೂಗಿದರು ಇತರರು ನಕ್ಕರು. ಇಲ್ಲಿ ವ್ಯಾಕರಣದ ತಪ್ಪಿನಿಂದಾಗಿ ಹಾಸ್ಯ ಹುಟ್ಟಿತು. ಆದರೆ ಹಾಸ್ಯಕ್ಕೋಸ್ಕರ ಭಾಷಾ ಮರ್ಯಾದೆಯನ್ನು ಬಿಡಬಾರದು ಅಲ್ಲವೆ? ವ್ಯಾಕರಣವನ್ನು ಆ ಮಿತ್ರರು ಕಲಿತಿದ್ದರೆ ಭಾಷೆಯ ರಚನೆ ಅವರಿಗೆ ತಿಳಿದಿರುತ್ತಿತ್ತು. ಅವರ ಮಾತುಗಳು ನಿಯಮಾಧಿನವಾಗಿ ಶುದ್ಧವಾಗಿ ಇರುತ್ತಿದ್ದುವು. ತುಂಬಾ ಕಷ್ಟವನ್ನು ಕೊಡುವ ವ್ಯಾಕರಣ ಶಾಸ್ತ್ರವನ್ನು ಹೊಂದಿರುವ ಭಾಷೆಗಳನ್ನು ಜನರು ಕಲಿಯಲು ಪ್ರಯತ್ನಿಸುವುದಿಲ್ಲ. ಕನ್ನಡದ ವ್ಯಾಕರಣ ಅಷ್ಟು ಕಠಿಣವಾದುದಲ್ಲ. ಲಿಂಗ ವಚನ ಇತ್ಯಾದಿಗಳು ಅರ್ಥಾನುಸಾರಿಯಾಗಿ ಇರುವುದರಿಂದ ಕಲಿಯುವವರು ಕಷ್ಟಪಡಬೇಕಾಗಿಲ್ಲ. ವ್ಯಾಕರಣವನ್ನು ಬಲ್ಲವರು ಯಾವ ಭಾಷೆಯಲ್ಲಾದರೂ ಸುಲಭವಾಗಿ ಉತ್ತೀರ್ಣರಾಗುತ್ತಾರೆ.

ಕೇಶಿರಾಜನು ವ್ಯಾಕರಣದ ಪ್ರಯೋಜನವನ್ನು ಕುರಿತು ಹೇಳುತ್ತಾ 'ವಿದ್ವಾಂಸರಿಗೆ ತತ್ತ್ವಜ್ಞಾನವೂ, ಮುಕ್ತಿಯೂ ದೊರಕುತ್ತದೆ' ಎಂದು ಹೇಳಿದ್ದಾನೆ. ಅಕ್ಷರ ವಿದ್ಯೆಯು ಇಲ್ಲದ ಜ್ಞಾನಿಗಳಿಲ್ಲವೆ ಎಂದು ವಾದ ಮಾಡಬೇಡಿ. ಅಂತಹವರು ಇದ್ದಾರೆ. ಆದರೆ ಅಂತಹವರು ತುಂಬಾ ವಿರಳ, ಮಕ್ಕಳು ವ್ಯಾಕರಣವನ್ನು ಕಲಿಯಲು ತುಂಬಾ ಕಷ್ಟಪಡುವುದಿಲ್ಲ. ಚಿಕ್ಕ ವಯಸ್ಸಿನ ವೈಶಿಷ್ಟ್ಯದಿಂದ ಅವರು ಅದನ್ನು ಚೆನ್ನಾಗಿ ತಿಳಿದುಕೊಳ್ಳಬಲ್ಲರು, ಅವರಿಗೆ ಕಲಿಸುವ ಗುರುಗಳು ಮಾತ್ರ ಚೆನ್ನಾಗಿ ತಿಳಿದು ಬೋಧಿಸುವವರಾಗಬೇಕು. ಚಿಕ್ಕವಯಸ್ಸಿನಲ್ಲಿಯೇ ಬಂದ ವ್ಯಾಕರಣ ಜ್ಞಾನವು

ಅವರನ್ನು ಎಂದೆಂದಿಗೂ ಬಿಟ್ಟುಹೋಗುವುದಿಲ್ಲ. ಅವರು ಸರಿಯಾದ ರೀತಿಯಲ್ಲಿ ಅರ್ಥವನ್ನು ಗ್ರಹಿಸಲು, ಮಾತನಾಡಲು, ಬರೆಯಲು ಚೆನ್ನಾಗಿ ಕಲಿತಿರುತ್ತಾರೆ. ಒಂದು ಪತ್ರಿಕೆಯನ್ನು ಓದುವಾಗಲೂ ತಪ್ಪುಗಳನ್ನು ಕಂಡು ಹಿಡಿಯುವಷ್ಟು ಅರಿವು ಅವರಿಗೆ ಲಭಿಸಿರುತ್ತದೆ. ಕತೆ, ಕಾವ್ಯ ಇತ್ಯಾದಿಗಳನ್ನು ಓದಿ ಅರ್ಥಮಾಡಿಕೊಳ್ಳಲು ವ್ಯಾಕರಣದ ಜ್ಞಾನ ಇರಬೇಕು ಎಂದು ಹೇಳಬೇಕಾಗಿಯೇ ಇಲ್ಲ ಅಲ್ಲವೆ. ಇನ್ನು ನಡುಗನ್ನಡ, ಹಳಗನ್ನಡದ ಕಾವ್ಯಗಳನ್ನು ಅರ್ಥ ಮಾಡಿಕೊಳ್ಳಲು ವ್ಯಾಕರಣದ ಅಗತ್ಯವು ಎಷ್ಟೆಂಬುದನ್ನು ನೀವು ಬಲ್ಲಿರಿ. ಸ್ವಂತ ಭಾಷೆಯೇ ಆಗಲೀ, ಪರಭಾಷೆಯೇ ಆಗಲಿ ಅದರ ಸಂಪೂರ್ಣ ಶಕ್ತಿಯನ್ನು ಅರ್ಥಮಾಡಿಕೊಳ್ಳಲು ವ್ಯಾಕರಣ ಶಾಸ್ತ್ರದ ಹಿನ್ನೆಲೆ ಅನಿವಾರ್ಯವಾದುದು.

## 1.5 ಶಬ್ದ ಮಣಿದರ್ಪಣದ ಪರಿಚಯ

ಇದುವರೆಗೆ ನೀವು ವ್ಯಾಕರಣದ ಆವಶ್ಯಕತೆಯ ಬಗ್ಗೆ, ಆ ಶಾಸ್ತ್ರದ ಕೆಲವು ಕೃತಿಗಳ ಬಗ್ಗೆ ವಿಷಯ ಸಂಗ್ರಹಣ ಮಾಡಿದ್ದೀರಿ. ಅದರಲ್ಲಿ ಶಬ್ದಮಣಿದರ್ಪಣವನ್ನು ಕುರಿತು ನಾವು ಹೆಚ್ಚು ತಿಳಿದುಕೊಳ್ಳಬೇಕಾಗಿದೆ, ಏಕೆಂದರೆ ಅದು ಪಠ್ಯಗ್ರಂಥ. ಈ ಗ್ರಂಥದ ಪರಿಚಯವನ್ನು ಸ್ವತಃ ಕೇಶಿರಾಜನೇ ಮಾಡಿಕೊಟ್ಟಿದ್ದಾನೆ. ಅದನ್ನು ಕೂಡ ಕ್ರಮಬದ್ಧವಾದ ರೀತಿಯಲ್ಲಿ ಮಾಡಿದ್ದಾನೆ. ಆತನು ಹೇಳುವಂತ ಮೊದಲು ಭಾಷೆಯ (ಮಾತಿನ) ಮಹಿಮೆಯನ್ನು ವಿವರಿಸಿ, ಅನಂತರ ವ್ಯಾಕರಣದ ಹಿರಿಮೆಯನ್ನು ತಿಳಿಸಿದ್ದೇನೆ ಎಂದು ಹೇಳಿದ್ದಾನೆ. ಅನಂತರ ತನ್ನ ಸ್ವಂತ ವಿಷಯ, ಯಾವ ಗ್ರಂಥಗಳಿಂದ ಸಹಾಯ ಪಡೆದಿದ್ದೇನೆ ಎನ್ನುವುದು, ಇತ್ಯಾದಿಗಳನ್ನು ಕ್ರಮವಾಗಿ ನಿರೂಪಿಸಿದ್ದಾನೆ. ಮೊದಲು ಆತನು ಸರಸ್ವತೀಸ್ತುತಿಯನ್ನು ಮಾಡಿದ್ದಾನೆ. ಅದು ಬಹಳ ವಿಶಿಷ್ಟವಾದುದು. ಮಾನವನ ಪಂಚೇಂದ್ರಿಯಗಳಾದ ಕಣ್ಣು ಕಿವಿ ಮೂಗು ನಾಲಗೆ ಚರ್ಮ ಇವುಗಳಿಂದ ರೂಪ, ಶಬ್ದ, ಗಂಧ, ರಸ, ಸ್ಪರ್ಶ ಸಂವೇದನೆಗಳನ್ನು ಶ್ರೋತ್ರೇಂದ್ರಿಯದ (ಕಿವಿ) ಮೂಲಕವೇ ನೀಡುವ ವಾಗ್ದೇವಿಗೆ ನಮಸ್ಕರಿಸಿದ್ದಾನೆ. ಶಬ್ದಮಣಿ ದರ್ಪಣ ಎಂಬ ಹೆಸರನ್ನು ಬಹಳ ಹಿಂದೆ ಇಂಗ್ಲಿಷಿಗೆ ತರ್ಜುಮೆ ಮಾಡಿರುವುದನ್ನು ಕಾಣುತ್ತೇವೆ. ಶಬ್ದಮಣಿದರ್ಪಣ = Word Jewel Mirror. ಅಂದರೆ ಶಬ್ದವೆಂಬ ಅಮೂಲ್ಯ ಮಣಿಗೆ ಹಿಡಿದ ಕನ್ನಡಿ ಇದು ಎಂದು ಭಾವಿಸಿ ಇಂಗ್ಲಿಷಿಗೆ ಈ ರೀತಿ ಅನುವಾದಿಸಿದ್ದರು.

ಕೇಶಿರಾಜನು ತನ್ನ ಕೃತಿಯನ್ನು ರಚಿಸಲು ಗಜನ, ಗುಣನಂದಿ ಮನಸಿಜ, ಅಸಗ, ಚಂದ್ರ ಭಟ್ಟ, ಗುಣವರ್ಮ, ಶ್ರೀ ವಿಜಯ, ಪೊನ್ನ ಪಂಪ, ಸುಜನೋತ್ತಂಸ ಮುಂತಾದವರ ಕೃತಿಗಳು ಆಧಾರ ಎಂದು ಆತನೇ ಹೇಳಿಕೊಂಡಿದ್ದಾನೆ. ಸಾಮಾನ್ಯವಾಗಿ ಇವರು 9ನೇ ಶತಮಾನದಿಂದ 12ನೇ ಶತಮಾನದ ಅವಧಿಯಲ್ಲಿ ಇದ್ದರೆಂದು ತಿಳಿಯಲಾಗಿದೆ, ಭಾಷೆಯ ದೃಷ್ಟಿಯಿಂದಲೂ ಇದು ಹಳಗನ್ನಡದ ಒಂದು ಪ್ರಮುಖ ಘಟ್ಟ ಎನ್ನಬಹುದು. ಮೇಲೆ ಹೇಳಿರುವ ಕವಿಗಳ ಪೈಕಿ ಕೆಲವರ ಕೃತಿಗಳು ಲಭಿಸಿವೆ. ಇನ್ನು ಕೆಲವರ ಕೃತಿಗಳು ಲಭಿಸಿಲ್ಲ. ಕೇಶಿರಾಜನು ಆಯ್ದುಕೊಂಡು ಕೊಟ್ಟಿರುವ ಉದಾಹರಣೆಗಳು ಅಪೂರ್ವವಾದ ಪ್ರಯೋಗಗಳಾಗಿ ಉಳಿದು ಬಂದಿರುವುದರಿಂದ ಆಯಾ ಕವಿಗಳ ಕೃತಿಗಳ ಹೆಸರು ನಮಗೆ ತಿಳಿದಂತಾಗಿದೆ.

ಕೇಶಿರಾಜನು ತನ್ನ ಕೃತಿಯನ್ನು ಕಂದಪದ್ಯಗಳ ರೂಪದಲ್ಲಿ ರಚಿಸಿದ್ದಾನೆ. ಪದ್ಯವು ಗದ್ಯಕ್ಕಿಂತ

ಕೊಂಚ ಕ್ಲಿಷ್ಟವಾದುದು. ಅದು ಸುಲಭವಾಗಿ ಅರ್ಥವಾಗದೆ ಇರಬಹುದು. ಆದ್ದರಿಂದ ಆತನು ತನ್ನ ಕಂದ ರೂಪದ ಸೂತ್ರಗಳಿಗೆ ತಾನೇ ಗದ್ಯದಲ್ಲಿ ಸಂಕ್ಷಿಪ್ತವಾದ ವೃತ್ತಿಗಳನ್ನು ಬರೆದಿದ್ದಾನೆ. ಆತನು ತನ್ನ ಗ್ರಂಥದಲ್ಲಿ ತಾನು ಮಾಡಿಕೊಂಡಿರುವ ವಿಭಾಗ ಕ್ರಮವನ್ನು ತಿಳಿಸಿದ್ದಾನೆ. ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಸಂಧಿಗಳು ಇವೆ. ಆತನು ವ್ಯಾಕರಣ ಅಧ್ಯಯನದಿಂದ ಉಂಟಾಗುವ ಫಲವನ್ನೂ ಕೂಡ ತಿಳಿಸಿದ್ದಾನೆ. ಇದು ಒಂದು ವಿಶಿಷ್ಟವಾದ ವಿಷಯವಾಗಿದೆ ಇದಕ್ಕಿಂದ ಮೊದಲು ಆತನು ತಿಳಿಸಿರುವ ವಿಷಯವು ನಮ್ಮನ್ನು ಚಕಿತಗೊಳಿಸುತ್ತದೆ. ಯಾವುದನ್ನು ಭಾಷಾ ವಿಜ್ಞಾನಿಗಳು ವಿವರಿಸಲು ಪ್ರಯತ್ನಿಸಿದ್ದಾರೋ ಅಂತಹ ವಿಷಯವನ್ನು ಬಹಳ ಹಿಂದೆಯೇ ಗ್ರಹಿಸಿ ತಿಳಿಸಿರುವುದು ಕೇಶಿರಾಜನ ಸೂಕ್ಷ್ಮ ಬುದ್ಧಿಯನ್ನು ನಮ್ಮ ಗಮನಕ್ಕೆ ತರುತ್ತದೆ. ಧ್ವನಿಗಳ ಉಗಮವು ನಾಭಿಮೂಲದಿಂದ ಆಗುತ್ತದೆ. ಅಂದರೆ (ನಾಭಿ) ಹೊಕ್ಕುಳಿನ ಸ್ಥಳದಿಂದ ಧ್ವನಿಗಳು ಹುಟ್ಟುತ್ತವೆ ಎಂದಿದ್ದಾನೆ. ಅದಕ್ಕೆ ಉಸಿರಿನ ಚಲನೆ ಕಾರಣವಾಗುತ್ತದೆ ಮತ್ತು ಮಾತನಾಡುವವನ ಇಷ್ಟವು ಇನ್ನೂ ಹೆಚ್ಚಿನ ಮೂಲಕಾರಣವಾಗಿರುತ್ತದೆ. ಮಾತನಾಡುವ ಇಚ್ಛೆಯೇ ಇಲ್ಲದಿದ್ದರೆ ಧ್ವನಿಯೇ ಹೊರಡುವುದಿಲ್ಲ ಅಲ್ಲವೆ? ಆದ್ದರಿಂದ ಇಚ್ಛಾಶಕ್ತಿಯೇ ಎಲ್ಲಕ್ಕೂ ಮೂಲಕಾರಣವಾಗಿರುತ್ತದೆ. ಧ್ವನಿಗಳು ಹೊಕ್ಕುಳಿನ ಸಮೀಪದಲ್ಲಿ ಕಹಳೆಯ ಹಾಗೆ ರೂಪ ತಾಳಿ ಹೊರಹೊಮ್ಮುತ್ತವೆ ಎಂದು ಹೇಳಿದ್ದಾನೆ. ಧ್ವನಿಯ ಬಣ್ಣವು ಬಿಳಿಯ ಬಣ್ಣ ಎಂದು ಹೇಳಿದ್ದಾನೆ. ಬಿಳಿಯ ಬಣ್ಣ ಪರಿಶುದ್ಧತೆಯನ್ನು ಸೂಚಿಸುತ್ತದೆ.

ಪ್ರಾಚೀನ ಕೃತಿಕಾರರು ತಮ್ಮ ಕೃತಿಗಳ ಅಧ್ಯಯನದ ಫಲಿತಾಂಶವನ್ನು ತಿಳಿಸುವ ಸಂಪ್ರದಾಯವನ್ನು ಪಾಲಿಸುತ್ತಿದ್ದರು. ಕೃತಿಗಳನ್ನು ಓದಿದವರಿಗೆ, ಕೇಳಿದವರಿಗೆ ಕೆಲವು ಪುಣ್ಯಗಳು ಲಭಿಸುತ್ತವೆ ಎಂದು ಹೇಳುವುದರಿಂದ ಜನರಿಗೆ ಓದುವ ಪ್ರೇರಣೆಯನ್ನು ಉಂಟುಮಾಡುವುದು ಅವರ ಅಪೇಕ್ಷೆಯೂ ಆಗಿರಬಹುದು. ವ್ಯಾಕರಣದ ಅಧ್ಯಯನದಿಂದ ವಿದ್ವಾಂಸರಿಗೆ ಹೇಗೆ ಲಾಭವಾಗುತ್ತದೆ ಎಂಬುದನ್ನು ಕೇಶಿರಾಜನು ಇಲ್ಲಿ ತಿಳಿಸಿದ್ದಾನೆ. ವ್ಯಾಕರಣದಿಂದಾಗಿ ಪದಗಳ ಜ್ಞಾನ ಲಭಿಸುತ್ತದೆ. ಪದ ಮತ್ತು ಅರ್ಥ ಇವುಗಳ ಜ್ಞಾನದಿಂದಾಗಿ ತತ್ತ್ವಗಳು ತಿಳಿಯುತ್ತವೆ. ಅನಂತರ ಮುಕ್ತಿಯು ಅವರಿಗೆ ಲಭಿಸುತ್ತದೆ. ಅಂದರೆ ವ್ಯಾಕರಣವನ್ನು ಓದುವವರಿಗೆ ಮೋಕ್ಷವು ಲಭಿಸುತ್ತದೆ ಎಂದು ಕೇಶಿರಾಜನು ಹೇಳಿರುವುದನ್ನು ನೋಡಬಹುದು. ಇದೇ ಫಲಶ್ರುತಿ ಎನ್ನಿಸಿಕೊಳ್ಳುತ್ತದೆ.

## 1.6. ಅಕ್ಷರ ಸಂಜ್ಞಾ ಪ್ರಕರಣ

### 1.6.0. ಸ್ವರಗಳು

ಕೇಶಿರಾಜನ ವ್ಯಾಕರಣ ಗ್ರಂಥದಲ್ಲಿ ಇದು ಮೊದಲನೆಯ ಅಧ್ಯಾಯವಾಗಿದೆ. ಆದರೆ ಇದನ್ನು ಕೇಶಿರಾಜನು ಸಂಧಿ ಪ್ರಕರಣದೊಡನೆ ಸೇರಿಸಿಬಿಟ್ಟಿದ್ದಾನೆ. ಅಕ್ಷರಕ್ಕೆ ವರ್ಣ ಎಂದೂ ಕರೆಯಬಹುದು ಎನ್ನುತ್ತಾನೆ. ವರ್ಣಕ್ಕೆ ಮತ್ತೊಂದು ವಿಶಿಷ್ಟವಾದ ಹೆಸರನ್ನು ಆತನು ಕೊಟ್ಟಿದ್ದಾನೆ. ಅದೇ ಶುದ್ಧಗೆ ಅಥವಾ ತದ್ಭವ ರೂಪದ 'ಸುದ್ದಗೆ' ಎನ್ನುವುದು. ಅಕ್ಷರಗಳು ನಮ್ಮ ಕಿವಿಯ ಮೇಲೆ ಬಿದ್ದು ಅರ್ಥವನ್ನು ಉಂಟುಮಾಡುತ್ತವೆ. ಆದರೆ ಅವೆಲ್ಲವೂ ಬರಹ ರೂಪವನ್ನು ತಾಳದೆ ಇರಬಹುದು. ಆದ್ದರಿಂದ ಯಾವುದನ್ನು ನಾಲಗೆಯ ಮೂಲಕ ಉಚ್ಚರಿಸಲು ಸಾಧ್ಯವಿಲ್ಲವೋ ಅದನ್ನು ಅಕ್ಷರವೆಂದು

ಕರೆಯಲಾಗದು ಎಂದು ಹೇಳುತ್ತಾನೆ. ಆದ್ದರಿಂದ ಅಕ್ಷರಕ್ಕೆ ಮುಖ್ಯವಾಗಿ ಇರುವ ಲಕ್ಷಣಗಳೆಂದರೆ 1) ಬರವಣಿಗೆಗೆ ಒದಗಬೇಕು 2) ಉಚ್ಚಾರಣೆಯು ಸಾಧ್ಯವಾಗಬೇಕು. ಅಕ್ಷರವನ್ನು ಶ್ರಾವಣ ರೂಪ ಮತ್ತು ಚಾಕ್ಷುಷ ರೂಪ ಎಂಬ ವಿಭಜನೆಯನ್ನು ಮಾಡಿದವರು ಪುರಾತನರು ಎನ್ನುತ್ತಾನೆ. ಕೇವಲ ಕಿವಿಗೆ ಕೇಳಿಸುವ ಅಕ್ಷರವನ್ನು ಶ್ರಾವಣ ಎಂದು ಕರೆಯುತ್ತಾರೆ. ಉದಾಹರಣೆಗೆ ಗುಡುಗಿನ ಸದ್ದು ಇತ್ಯಾದಿಗಳು. ಅವುಗಳನ್ನು ಬರೆದು ತೋರಿಸಲಾಗದು. ಲಿಪಿಯ ಮೂಲಕ ಕಣ್ಣಿಗೆ ಕಾಣುವುದನ್ನು 'ಚಾಕ್ಷುಷ' ಎಂದು ಕರೆಯುತ್ತಾರೆ. ಈ ಎರಡೂ ಲಕ್ಷಣಗಳು ಅಕ್ಷರಕ್ಕೆ ಇರಲೇಬೇಕು ಎನ್ನುವುದು ಆತನ ಅಭಿಪ್ರಾಯ.

ಕೇಶಿರಾಜನು 'ಅಕಾರಂ ಮೊದಲಾಗಿದೆ ಪದಿನಾಲ್ಕುಂ ಸ್ವರಂಗಳ್' ಎಂದು ಹೇಳಿ ಅಆ, ಇಈ......... ಮುಂತಾದ ಜೋಡಿಗಳನ್ನು ಸವರ್ಣಗಳೆಂದು ಕರೆಯುತ್ತಾನೆ. ಸವರ್ಣಗಳನ್ನು ಆಅ, ಈಇ ಎಂದು ಬರೆದರೂ ಅದೇ ಹೆಸರು ಉಳಿಯುತ್ತದೆ ಎನ್ನುತ್ತಾನೆ.

**ಸ್ವರಗಳು:** ಅಆ ಇಈ ಉಊ ಋೠ, ಌೡ ,ಏಐ ಓಔ ಇವುಗಳಲ್ಲಿ ಮೊದಲ ಐದು ಜೋಡಿಗಳು 'ಸಮಾನಗಳು' ಹಾಗೂ ಸವರ್ಣಗಳು. ಒಟ್ಟು ಹದಿನಾಲ್ಕು ಸ್ವರಗಳಲ್ಲಿ ಎ,ಒ ಎಂಬ ಸ್ವರಗಳನ್ನು ಬಿಟ್ಟು ಬಿಡಲಾಗಿದೆ. ಕನ್ನಡದಲ್ಲಿ ಕಂಡುಬರದ ಌ ೡ ಎಂಬ ಎರಡು ಸ್ವರಗಳನ್ನು ಸೇರಿಸಲಾಗಿದೆ. ಇದನ್ನು ಕೇಶಿರಾಜನು ಗಮನಿಸಿ ಮತ್ತೆ ಹೇಳಬೇಕಾಗಿಬಂದುದು ಏಕೆಂದರೆ ಅವನು ಸಂಸ್ಕೃತ ವರ್ಣಮಾಲೆಯನ್ನು ಕಣ್ಣಮುಂದೆ ಇಟ್ಟುಕೊಂಡು ಬರೆಯುತ್ತಿರುವುದೇ ಕಾರಣವಾಗಿದೆ. ಏಕೆಂದರೆ ತಕ್ಷಣವೇ ಎಏ, ಒಓ ಎಂಬ ಸವರ್ಣಗಳು ನಿಜವಾಗಿಯೂ ಇವೆ ಎಂದು ಹೇಳಿರುವುದನ್ನು ಕಾಣುತ್ತೇವೆ.

ಮೇಲಿನ ಸ್ವರಗಳಲ್ಲಿ 'ಅಆ' ಜೋಡಿಯನ್ನು ಬಿಟ್ಟು ಉಳಿದವುಗಳನ್ನು ಅಂದರೆ 12 ಅಕ್ಷರಗಳನ್ನು "ನಾಮಿ" ಎಂದು ಕರೆದಿದ್ದಾನೆ. ಅವುಗಳು ನಮ್ಯಗುಣವನ್ನು ಹೊಂದಿ ಬಾಗುತ್ತವೆ, ಇತರ ಅಕ್ಷರಗಳೊಡನೆ ಸೇರಿಕೊಂಡು ಹೋಗುತ್ತವೆ ಎಂಬ ಅಭಿಪ್ರಾಯವಿರುವಂತೆ ಕಾಣುತ್ತದೆ.

ಸ್ವರಗಳಲ್ಲಿ ಯೋಗವಾಹಗಳು ಎಂಬ ಹೆಸರಿನ ನಾಲ್ಕು ಸಂಜ್ಞೆಗಳುಂಟು. ಅವುಗಳು 'ಬಿಂದು, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ'. ಇವುಗಳಲ್ಲಿ ಬಿಂದು, ವಿಸರ್ಗಗಳು ನಿಮಗೆ ತಿಳಿದಿವೆ. ಬಿಂದು ಎಂದರೆ 'ಂ' ಸಂಜ್ಞೆಯನ್ನು ಪಡೆದಿರುವುದು ಮತ್ತು ವಿಸರ್ಗ ಎಂದರೆ 'ಃ' ಸಂಜ್ಞೆಯನ್ನು ಹೊಂದಿರುವುದು. ಆದರೆ ಜೀಹ್ವಾಮೂಲೀಯ [X,] ಮತ್ತು ಉಪಧ್ಮಾನೀಯ [ಪಿ] ಇವುಗಳು ಕನ್ನಡಿಗರಿಗೆ ಪರಿಚಯವಿಲ್ಲದ ಸಂಜ್ಞೆಗಳು. ಬಿಂದು ವಿಸರ್ಗಗಳ ಪರಿಚಯ ನಿಮಗೆ ಇದ್ದೇ ಇದೆ. ಜಿಹ್ವಾಮೂಲೀಯವು ನಾಲಗೆಯ ಮೂಲಭಾಗದಿಂದ ಹೊರಹೊಮ್ಮುವ ಧ್ವನಿಯಾಗಿದೆ. ಉದಾಹರಣೆಗೆ 'ಅಂತX,ಕರಣ' [ಅಂತಃಕರಣ]. ಉಪಧ್ಮಾನೀಯವು ಕಡಿಮೆ ಉಸಿರನ್ನು ಬಳಸಿ ಉಚ್ಚರಿಸುವಂತಹುದು. ಅದು 'ಪಕಾರ' ದೊಡನೆ ಸೇರಿ ಪ್ರಕಟವಾಗುತ್ತದೆ. ಅಂತ ಪಿಪುರ [ಅಂತಃ ಪುರ].

## 1.6.1. ವ್ಯಂಜನಗಳು

ವ್ಯಂಜನಗಳು ಯಾವುವು ಎಂಬುದನ್ನು ನೀವು ತಿಳಿದಿರುವಿರಿ. ಕೇಶಿರಾಜನು 'ಕ' ಕಾರದಿಂದ ಹಿಡಿದು 'ಳ' ಕಾರದವರೆಗೆ ಇರುವ ಅಕ್ಷರಗಳನ್ನು ವ್ಯಂಜನಗಳೆಂದು ಕರೆದಿದ್ದಾನೆ. ಅವುಗಳನ್ನು ಉಚ್ಚರಿಸುವ ಧ್ವನ್ಯಂಗಗಳನ್ನು ಅನುಸರಿಸಿ ಕವರ್ಗ ಚವರ್ಗ ಟವರ್ಗ, ತವರ್ಗ, ಪವರ್ಗ ಎಂದು ವಿಭಜಿಸಲಾಗಿದೆ. ವರ್ಗಕ್ಕೆ 5 ಅಕ್ಷರಗಳಂತೆ 5 ವರ್ಗಗಳಿಂದ ಒಟ್ಟು 25 ವ್ಯಂಜನಗಳಾಗುತ್ತವೆ. ಯ,ರ,ಲ,ವ, ಶ,ಷ,ಸ,ಹ,ಳ ಎಂಬ ವ್ಯಂಜನಗಳು ಬಿಡಿ ಬಿಡಿಯಾಗಿವೆ. ಆದ್ದರಿಂದ ಅವುಗಳು ಯಾವ ವರ್ಗಕ್ಕೂ ಸೇರುವುದಿಲ್ಲ. ನೀವು ರಾಜಕಾರಣದಲ್ಲಿ ಪಕ್ಷೇತರರು ಎಂದು ಓದಿದ್ದೀರಿ. ಹಾಗೆ ಇವು ಯಾವುದಕ್ಕೂ ಸೇರದೆ ಅವರ್ಗೀಯಗಳು ಎನ್ನಿಸಿಕೊಂಡಿವೆ. ಕವರ್ಗವೇ ಮೊದಲನೆಯದೆಂದು ಏಕೆ ಕರೆಯಬೇಕು ಮತ್ತು ಪವರ್ಗವೇ ಏಕೆ ಕೊನೆಯದಾಗಬೇಕು ಎಂಬ ಪ್ರಶ್ನೆ ನಿಮಗೆ ಹೊಳೆದಿರಬಹುದು. ನಿಜ, ಅದೇಕೆಂದರೆ ಅಕ್ಷರಗಳು ಹುಟ್ಟುವ ಸ್ಥಾನವನ್ನು ಗಮನಿಸಿ 'ಕ' ವರ್ಗ ಮೊದಲನೆಯದು, ಪವರ್ಗ ಕೊನೆಯದು ಎಂದು ನಿರ್ಧರಿಸಲಾಗಿದೆ. ಕಂಠದಿಂದ ಹಿಡಿದು ತುಟಿಯವರೆಗಿನ ಉತ್ಪತ್ತಿ ಸ್ಥಾನಗಳನ್ನು ಗಮನಿಸಿ ಹಾಗೆ ಮಾಡಲಾಗಿದೆ. ವ್ಯಂಜನಗಳು ಪೂರ್ಣಾಕ್ಷರಗಳಾಗುವುದಿಲ್ಲ ಮತ್ತು ಅವುಗಳು ಸ್ವರಗಳೊಡನೆ ಸೇರಿಯೇ ಪೂರ್ಣವಾಗಬೇಕು. ಸಾಮಾನ್ಯವಾಗಿ ನಾವು ಬರೆಯುವಾಗ ವ್ಯಂಜನಕ್ಕೆ 'ಅ' ಕಾರವನ್ನು ಸೇರಿಸಿಯೇ ಬರೆದಿರುತ್ತೇವೆ.

ಕ ವರ್ಗ : ಕ್, ಖ್, ಗ್, ಘ್, ಙ್.
ಚ ವರ್ಗ: ಚ್, ಛ್, ಜ್. ಝ್, ಞ್.
ಟ ವರ್ಗ: ಟ್, ಠ್, ಡ್, ಢ್, ಣ್.
ತ ವರ್ಗ: ತ್, ಥ್, ದ್ ಧ್, ನ್.
ಪ ವರ್ಗ: ಪ್, ಫ್, ಬ್, ಭ್, ಮ್.

**ಅವರ್ಗೀಯಗಳು:** ಯ್,ರ್,ಲ್,ವ್,ಶ್,ಷ್,ಸ್,ಹ್,ಳ್ ಇವುಗಳು ಒಟ್ಟು 34 ವ್ಯಂಜನಗಳಾಗಿರುತ್ತವೆ. ಮೇಲಿನ ಪಟ್ಟಿಯಲ್ಲಿ ವರ್ಗದ 2ನೇ ಮತ್ತು 4ನೇ ಅಕ್ಷರಗಳು 'ಮಹಾಪ್ರಾಣಾಕ್ಷರ' ಗಳಾಗಿವೆ. ಇವುಗಳನ್ನು ಮಹಾಪ್ರಾಣಗಳು ಎಂದೂ ಹೇಳಬಹುದು. ಹಳಗನ್ನಡದ ವೈಯಾಕರಣರೆಲ್ಲರೂ ಸಾಮಾನ್ಯವಾಗಿ ಕನ್ನಡದಲ್ಲಿ ಮಹಾಪ್ರಾಣಗಳು ಇವೆ ಎಂದು ಹೇಳಿದ್ದಾರೆ. ಮಹಾಪ್ರಾಣಗಳು ಎಂದರೆ ಉಸಿರನ್ನು ನಿಲ್ಲಿಸಿ ರಭಸದಿಂದ ಹೊರಹೊಮ್ಮಿಸಿ ಉಚ್ಚರಿಸಬೇಕಾದ ಅಕ್ಷರಗಳು. ಕೇಶಿರಾಜನು ಇವುಗಳ ಬಗ್ಗೆ ಹೇಳುವಾಗ ಅಚ್ಚಗನ್ನಡದಲ್ಲಿ ಮಹಾಪ್ರಾಣಗಳು ಇಲ್ಲವೆಂಬ ಸಂಗತಿ ಗೋಚರಿಸಿರುವುದರಿಂದ ಆತನು 'ಸಂಖ್ಯೆ' ಮತ್ತು 'ಅನುಕರಣ' ಗಳಲ್ಲಿ ಮಾತ್ರ ಕಂಡುಬರುತ್ತವೆ ಎಂದು ಹೇಳಿದ್ದಾನೆ. ಆದರೆ ಸಂಖ್ಯೆಯಲ್ಲಿಯೂ ಮಹಾಪ್ರಾಣಗಳು ಕಂಡು ಬರುವುದಿಲ್ಲ. ಅನುಕರಣ ವಾಚಿಗಳಾದ ಧೊಪ್ಪನೆ, ಛಟೀರನೆ ಎಂದು ಹೇಳುವಾಗಲೂ ಅವು ಶ್ರಾವಣ ಮಾತ್ರವಾಗಿದ್ದು ಮೂಲ ಸದ್ದನ್ನು ಗಮನಿಸಿರುತ್ತವೆ. ಆದ್ದರಿಂದ ಭಾಷಾ ವಿಜ್ಞಾನಿಗಳು ದೀರ್ಘವಾಗಿ ವಿಶ್ಲೇಷಿಸಿ ಕನ್ನಡದಲ್ಲಿ ಮಹಾಪ್ರಾಣಗಳು ಇಲ್ಲ ಎಂದು ಹೇಳಿದ್ದಾರೆ. ಈಗ ನಾವು ಸಾಂಸ್ಕೃತಿಕ

ಕಾರಣಗಳಿಂದಾಗಿ ಮಹಾಪ್ರಾಣಗಳನ್ನು ರೂಢಿಗೆ ತಂದಿದ್ದೇವೆ. ಅವುಗಳು ಇಲ್ಲದೆ ವ್ಯವಹರಿಸುವುದೂ ಕಷ್ಟವೇ ಆಗುತ್ತದೆ.

## 1.7. ಅಕ್ಷರಗಳ ಸಂಖ್ಯೆ

ಕನ್ನಡ ವರ್ಣಮಾಲೆಯಲ್ಲಿ ಈಗ 49 ಅಕ್ಷರಗಳಿವೆ. 'ಋೂ' ಎಂಬ ದೀರ್ಘಸ್ವರವನ್ನು ಕೈಬಿಟ್ಟಿರುವುದರಿಂದ 49ಕ್ಕೆ ನಿಂತಿವೆ. ನಾವು ಸಂಸ್ಕೃತದ ವರ್ಣಮಾಲೆ, ಕೇಶಿರಾಜನು ಕೊಡುವ ಕನ್ನಡ ವರ್ಣಮಾಲೆ ಮತ್ತು ಅಚ್ಚಗನ್ನಡ ವರ್ಣಮಾಲೆ ಎಂದು ಮೂರು ಬಗೆಯ ಪಟ್ಟಿಗಳನ್ನು ಮಾಡಬಹುದು.

ಸಾಂಪ್ರದಾಯಿಕ ವರ್ಣಮಾಲೆ




ಕೇಶಿರಾಜನು ಕೊಡುವ ಕನ್ನಡ ವರ್ಣಮಾಲೆಯು ಬಹುಪಾಲು ಈಗ ನಾವು ಬಳಸುತ್ತಿರುವುದೇ ಆಗಿದೆ. ಅಚ್ಚಗನ್ನಡ ವರ್ಣಮಾಲೆಯು ಒಂದು ತಾತ್ವಿಕ ವಿವೇಚನೆಗೆ ಸಲ್ಲುತ್ತದೆ. ಆದರೂ ತಿಳಿದುಕೊಳ್ಳುವುದು ಅಪೇಕ್ಷಣೀಯವಾದುದು.

| ವಿಧಗಳು | ಸಂಸ್ಕೃತ ವರ್ಣಮಾಲೆ | ಕೇಶಿರಾಜನ ವರ್ಣಮಾಲೆ | ಅಚ್ಚಗನ್ನಡ ವರ್ಣಮಾಲ |
|---|---|---|---|
| ಸ್ವರಗಳು | ಅಆಇಈಉಊಋೠ ಌೡಏ ಐ ಓ ಔ=14 | ಅಆಇಈಉಊಋೠ ಌೡ ಏ ಐ ಓ ಔ=14 | ಅಆಇಈಉಊ ಎ ಏ ಒ ಓ=10 |
| ವರ್ಗೀಯ ವ್ಯಂಜನ | ಕ್ಖ್ಗ್ಘ್ಙ್ ಚ್ಛ್ಜ್ಝ್ಞ್ ಟ್ ಠ್ ಡ್ ಢ್ ಣ್ ತ್ ಥ್ ದ್ ಧ್ ನ್ ಪ್ ಫ್ ಬ್ ಭ್ ಮ್ =25 | ಕ್ ಖ್ ಗ್ ಘ್ ಙ್ ಚ್ಛ್ಜ್ಝ್ಞ್ ಟ್ ಠ್ ಡ್ ಢ್ ಣ್ ತ್ ಥ್ ದ್ ಧ್ ನ್ ಪ್ ಫ್ ಬ್ ಭ್ ಮ್ =25 | ಕ್ ಗ್ ಙ್ ಚ್ ಜ್ ಞ್ ಟ್ ಡ್ ಣ್ ತ್ ದ್ ನ್ ಪ್ ಬ್ ಮ್ =15 |
| ಅವರ್ಗೀಯ ವ್ಯಂಜನ | ಯ್,ರ್,ಲ್,ವ್ ಶ್ ಷ್,ಸ್,ಹ್,ಳ್[ಕ್ಷಳ] =9 | ಯ್,ರ್,ಲ್,ವ್,ಶ್ ಷ್,ಸ್,ಹ್,ಳ್ [ಕ್ಷಳ] =9 | ಯ್,ರ್,ಲ್,ವ್ ಸ್, ಹ್,ಳ್ [ಕುಳ] =7 |
| ಯೋಗವಾಹ | ಂ, ಃ, ೱ, ೲ =4 | ಂ, ಃ, ೱ, ೲ =4 | =0 |
| ದೇಶೀಯ | =0 | ಎ ಒ ಱ ೞ ಳ (ಕುಳ) =5 | ಱ ೞ =2 |
| ಒಟ್ಟು | 52 | 57 | 34 |

ಸಂಸ್ಕೃತ ವರ್ಣಮಾಲೆಯನ್ನು ಒಪ್ಪಿಕೊಂಡ ಕೇಶಿರಾಜನು ಹಳಗನ್ನಡದಲ್ಲಿ ವಾಸ್ತವವಾಗಿ ಇದ್ದ ಐದು ಅಕ್ಷರಗಳನ್ನು ಆದಕ್ಕೆ ಸೇರಿಸಿ ಒಟ್ಟು 57 ಅಕ್ಷರಗಳನ್ನು ತೋರಿಸಿದಂತಾಯಿತು. ಆದರೆ ಅವನ ಒಳ ಮನಸ್ಸು ಈ ರೀತಿಯ ಲೆಕ್ಕಾಚಾರವನ್ನು ಒಪ್ಪಿಕೊಳ್ಳಲಿಲ್ಲವೆಂದು ತೋರುತ್ತದೆ. ಆದ್ದರಿಂದ ತಾನು ನಿರೂಪಿಸಿದ ವರ್ಣಮಾಲೆಯಿಂದ ಋ ೠ ಌ ೡ ಶ ಷ ಃ ೱ ೲ ಳ (ಕ್ಷಳ) ಎಂಬ ಹತ್ತು ಅಕ್ಷರಗಳನ್ನು ತೆಗೆದು ಹಾಕಿ ಉಳಿದ 47 ಅಕ್ಷರಗಳನ್ನು 'ಸಾಲ್ಕತ್ತೇೞುಯ್ತುಳೆ ಸುದ್ದಗೆಯಚ್ಚಗನ್ನಡಕ್ಕೀ ಕ್ರಮದಿಂ' ಎಂದು ಹೇಳಿದ್ದಾನೆ. ಆದರೆ 'ಅಚ್ಚಗನ್ನಡಕ್ಕೆ' ಎಂದು ಹೇಳಿರುವುದನ್ನು ಮಾತ್ರ ಭಾಷಾ ವಿಜ್ಞಾನಿಗಳು ಒಪ್ಪುವುದಿಲ್ಲ. ಆ ಲೆಕ್ಕದಲ್ಲಿ ಶುದ್ದಗೆಯಲ್ಲಿ ಹತ್ತು ಮಹಾಪ್ರಾಣಗಳು ಇರುವುದಿಲ್ಲ, ಐ, ಔ ಗಳಿಗೆ ಬದಲು ಅಯ್ ಮತ್ತು ಅವ್ ಬರುತ್ತವೆ, ಅನುಸ್ವಾರಕ್ಕೆ ಬದಲು ಅನುನಾಸಿಕಗಳನ್ನು ಬಳಸಬಹುದು ಆದ್ದರಿಂದ 47 ರಲ್ಲಿ 13 ಅಕ್ಷರಗಳನ್ನು ತೆಗೆದರೆ 34 ಅಕ್ಷರಗಳು ಉಳಿಯುತ್ತವೆ. ಆದರೆ ವಾಸ್ತವ ಸ್ಥಿತಿಯಲ್ಲಿ ಈಗ ರೂಢಿಯಲ್ಲಿರುವುದು ಸ್ವರಗಳು 13, ವ್ಯಂಜನಗಳು 34, ಯೋಗವಾಹ 2 ಅಂದರೆ ಒಟ್ಟು 49 ಅಕ್ಷರಗಳು

## 1.8. ಕೆಲವು ವಿಶೇಷ ವಿಚಾರಗಳು

ಕೇಶಿರಾಜನು ಅಕ್ಷರಗಳ ಸಂಜ್ಞೆಯ ವಿಚಾರವನ್ನು ಹೇಳುವಾಗ ಕೆಲವು ವಿಶೇಷವಾದ ವಿಚಾರಗಳನ್ನು ಪ್ರಸ್ತಾಪಿಸಿದ್ದಾನೆ. ರ-ಱ, ಡ-ಟ, ಲ-ಳ ಎಂಬುವುಗಳನ್ನು ಏಕಸ್ಥಾನೀಯಗಳೆಂದು ಕರೆಯುತ್ತಾನೆ. ಆದರೆ ಲ-ಳ ಜೋಡಿಯನ್ನು ಏಕಸ್ಥಾನೀಯವೆಂದು ಒಪ್ಪುವುದು ಕಷ್ಟವಾಗುತ್ತದೆ.

ಏಕಸ್ಥಾನೀಯುಗಳು ಎಂದರೆ ಒಂದೇ ಉಚ್ಚಾರಣಾ ಸ್ಥಾನದಿಂದ ಹುಟ್ಟುವ ಅಕ್ಷರಗಳು ಎಂದು ತಿಳಿಯಬೇಕು ಇವುಗಳು ಪದ್ಯದಲ್ಲಿ ವರ್ಣಾವೃತ್ತಿಗೆ ಬರಬಹುದೆಂದೂ ಪ್ರಾಸ ಮತ್ತು ಯಮಕ [ಅಲಂಕಾರ]ಕ್ಕೆ ಸಲ್ಲುವುದಿಲ್ಲ ಎಂದು ಹೇಳುತ್ತಾನೆ.

ಱ (ಶಕಟರೇಫ) ೞ (ರಳ) ಮತ್ತು ಳ (ಕುಳ) ಅಕ್ಷರಗಳನ್ನು ಮತ್ತು ಎ, ಒ ಗಳನ್ನೂ ಸೇರಿಸಿ ದೇಶೀಯಾಕ್ಷರಗಳೆಂದು ಕರೆದಿದ್ದಾನೆ. ಅವನ ಕಾಲಕ್ಕೆ ಆಗಲೇ ೞ ಮತ್ತು ಳ ಎಂಬ ಅಕ್ಷರಗಳಲ್ಲಿ ಉಚ್ಚಾರಣಾ ಭೇದವು ಕಡಿಮೆಯಾಗುತ್ತಾ ಬಂದಿತ್ತು . ಕೇಶಿರಾಜನಿಗೆ ಇದು ಅಷ್ಟು ಸಮಾಧಾನವನ್ನು ಉಂಟುಮಾಡಲಿಲ್ಲ. ೞ ಅಕ್ಷರದಲ್ಲಿ ಎರಡು ವಿಧ. ಒಂದು ಸಹಜವಾಗಿ ಇರುವ ೞ ಮತ್ತು ಇನ್ನೊಂದು ಸಾಂದರ್ಭಿಕವಾಗಿ ಆದೇಶವಾಗುವ ೞ. ಸಹಜ 'ೞ' ವನ್ನು ಒಳಗೊಂಡ ಶಬ್ದಗಳ ಪಟ್ಟಿಯನ್ನು ಮಾಡಿ ಒಂದು ಅರ್ಥದಿಂದ ಹಿಡಿದು ಐದು ಅರ್ಥಗಳವರೆಗೆ ಇರುವ ಶಬ್ದಗಳನ್ನು ಗುರುತಿಸಿದ್ದಾನೆ, ಪ್ರತ್ಯೇಕಿಸಿದ್ದಾನೆ. ಅಗೞ್ತೆ, ಅೞಿ, ಎೞ್ತು, ಸುೞಿ ಬೞಿ ಎಂಬುವು ಕ್ರಮವಾಗಿ ಒಂದು ಅರ್ಥಕ್ಕೆ, ಎರಡಕ್ಕೆ , ಮೂರಕ್ಕೆ, ನಾಲ್ಕಕ್ಕೆ, ಐದು ಅರ್ಥಗಳಿಗೆ ಉದಾಹರಣೆಯಾಗಿವೆ. ಇಂತಹ ಶಬ್ದಗಳ ದೊಡ್ಡ ಪಟ್ಟಿಯನ್ನೇ ಕೊಟ್ಟಿದ್ದಾನೆ. ಇನ್ನು ಸಾಂದರ್ಭಿಕವಾಗಿ ಆದೇಶವಾಗಿ ಬರುವ ೞ ಅಕ್ಷರದ ಬಗ್ಗೆ ಉದಾಹರಣೆಗಳನ್ನು ಕೊಟ್ಟಿದ್ದಾನೆ.
ಸಮಾಸವು ಘಟಿಸುವಾಗ: ಕಾಡು+ಕಿಚ್ಚು=ಕಾೞ್ಕಿಚ್ಚು,
ಡಕಾರಾಂತ ಧಾತುಗಳು ಕ್ರಿಯಪದಗಳಾಗುವಾಗ: ಮಾಡು - ಮಾೞ್ಪಂ; ನೋಡು - ನೋೞ್ಪ,
ದಾಡಿಮ, ಕೂಷ್ಮಾಂಡ ಮುಂತಾದುವು: ದಾೞಿಮ, ಕುಂಬೞ ಆಗುತ್ತವೆ.

ಕೇಶಿರಾಜನ ಕಾಲಕ್ಕೆ ಕೆಲವು 'ಲ' ಕಾರಾಂತ ಶಬ್ದಗಳು 'ಳ' ಕಾರಾಂತವಾಗಲು ಪ್ರಾರಂಭಿಸಿದ್ದುವೆಂದು ತೋರುತ್ತದೆ. ಇದರಿಂದ ಅವನಿಗೆ ಕೋಪ ಬಂದಂತೆ ಕಾಣುತ್ತದೆ, ಬೆರಲ್ ಎಂಬುದನ್ನು ಬೆರಳ್ ಎಂದು, ಕೊರಲ್ ಎಂಬುದನ್ನು ಕೊರಳ್ ಎಂದು ಜನರು ಕರೆಯುತ್ತಿದ್ದರು. ಅಂತಹವರನ್ನು ಕೇಶಿರಾಜನು ಗ್ರಾಮ್ಯರ್ [ಸ್ವಲ್ಪ ದಡ್ಡರು ಎಂದು ಅರ್ಥ] ಎಂದು ಕರೆಯುತ್ತಾನೆ. ಅವನ ಎಚ್ಚರಿಕೆಯನ್ನು ಜನರು ಗಮನಿಸಲಿಲ್ಲವೆಂದು ತೋರುತ್ತದೆ. ಜನರಿಗೆ ವೈಯಾಕರಣ ಗೊತ್ತಾಗುವುದು ಹೇಗೆ? ಆದ್ದರಿಂದ ಅವರು ಬೆರಳ್, ಕೊರಳ್ ಎಂದೇ ಹೇಳುತ್ತಿದ್ದರು. ಕಾಲಾಂತರದಲ್ಲಿ ಬೆರಳು, ಕೊರಳು ಎಂಬ ರೂಪಗಳೂ ಬಂದುವು.

ಕೇಶಿರಾಜನಿಗೆ ಹಳಗನ್ನಡ ಶಬ್ದರೂಪದ ಬಗ್ಗೆ ಕಾಳಜಿ ಹೆಚ್ಚು. ಹಳಗನ್ನಡದಲ್ಲಿ ಕೆಲವು ಶಬ್ದಗಳು ಬಿಂದುವಿನಿಂದ ಕೂಡಿದ್ದು ಅವುಗಳಲ್ಲಿ ಕೆಲವು ನಿತ್ಯ ಬಿಂದುಗಳೆಂದು, ಕೆಲವು ಶಬ್ದಗಳಲ್ಲಿರುವುದು ವಿಕಲ್ಪ ಬಿಂದುಗಳೆಂದೂ ಹೇಳಿದ್ದಾನೆ. ಆತನು ಹೇಳುವ ಎಷ್ಟೋ ನಿತ್ಯಬಿಂದುಗಳು ಅಬಿಂದುಕಗಳಾಗಿರುವುದು ಕಂಡು ಬರುತ್ತದೆ. ಬಿಂದುವನ್ನು ಬಿಡುವ ಕ್ರಿಯೆಯು ಅವನ ಎಚ್ಚರಿಕೆಗೆ ಬಗ್ಗಿದಂತೆ ಕಾಣುವುದಿಲ್ಲ.

ಉದಾ: ಅಡಂಗು>ಅಡಗು; ಅಪುಂಕು>ಅಪುಕು, ಒರಂಟು>ಒರಟು ಇತ್ಯಾದಿ. ವಿಕಲ್ಪ ಬಿಂದುಗಳುಳ್ಳ ಶಬ್ದಗಳು ಅಬಿಂದುಕಗಳಾಗಿರುವುದು ಇನ್ನೂ ಸುಲಭವಾದ ಕ್ರಿಯೆಯಾಗಿದೆ. ಉದಾ: ಇರುಂಪೆ>ಇರುಪೆ, ಜಿನುಂಗು>ಜಿನುಗು ಇತ್ಯಾದಿ.

ಶಿಥಿಲದ್ವಿತ್ವ ವಿಚಾರದಲ್ಲಿ ಕೇಶಿರಾಜನು ಕೆಲವು ನಿಯಮಗಳನ್ನು ತಿಳಿಸುತ್ತಾನೆ. ದ್ವಿತ್ವ ಎಂದರೆ ಒತ್ತಕ್ಷರ. ಶಿಥಿಲದ್ವಿತ್ವ ಎಂದರೆ ಒತ್ತಕ್ಷರವನ್ನು ಸರಳಾಕ್ಷರ ಎಂಬಂತೆ ತೇಲಿಸಿ ಉಚ್ಚರಿಸುವುದು ದ್ವಿತ್ವಗಳಲ್ಲಿ ಕೆಲವು ಸಜಾತೀಯ ಮತ್ತೆ ಕೆಲವು ವಿಜಾತೀಯ. ಒಂದೇ ಬಗೆಯ ವ್ಯಂಜನಗಳು ಸೇರಿ ಒತ್ತಕ್ಷರವಾಗಿದ್ದರೆ ಅದು ಸಜಾತೀಯ; ಬೇರೆ ಬೇರೆ ವ್ಯಂಜನಗಳು ಸೇರಿ ದ್ವಿತ್ವವಾಗಿದ್ದರೆ ಅದು ವಿಜಾತೀಯ. ದ್ವಿತ್ವಾಕ್ಷರವು ಬಂದಾಗ ಅದು ಹ್ರಸ್ವವಾಗಿದ್ದರೆ ಅದರ ಹಿಂದಿನ ಅಕ್ಷರವು ಗುರುವಾಗುತ್ತದೆ. ದ್ವಿತ್ವಾಕ್ಷರವು ಶಿಥಿಲವಾಗಿದ್ದರೆ ಅದರ ಹಿಂದಿನ ಅಕ್ಷರವು [ಲಘುವಾಗಿದ್ದರೆ] ಲಘುವಾಗಿಯೇ ಉಳಿಯುತ್ತದೆ. ಕೇಶಿರಾಜನು ಕೆಲವು ಸ್ವಯಂಸಿದ್ಧ ದ್ವಿತ್ವಗಳ ಉದಾಹರಣೆಯನ್ನು ಕೊಟ್ಟಿದ್ದಾನೆ. ಇವುಗಳು ಸಹಜ ಶಿಥಿಲದ್ವಿತ್ವಗಳು. ಉದಾ: ಬರ್ದಿಲ್, ಗರ್ದುಗೆ, ಅಮರ್ದು, ಎರ್ದೆವಾಯ್ ಇತ್ಯಾದಿ ಶಬ್ದಗಳು. ಇವುಗಳನ್ನು ಬಱ್ದಿಲ್, ಗಱ್ದುಗೆ, ಅಮಱ್ದು, ಎಱ್ದೆವಾಯ್ ಎಂದು ಬರೆದರೆ ಒತ್ತಕ್ಷರಗಳು ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತವೆ, ಸಹಜ ಶಿಥಿಲದ್ವಿತ್ವಗಳಲ್ಲದ ಕೆಲವು ನಾಮಪದಗಳು, ಕ್ರಿಯಾಪದಗಳು ಮತ್ತು ಸಮಾಸಗಳು ಎರಡನೆಯ ಗುಂಪಿಗೆ ಸೇರುತ್ತವೆ.

**೧. ನಾಮಪದಗಳು:** ಟ,ಳ,ರ ವರ್ಣಗಳಿಂದ ಅಂತ್ಯವಾಗಿರುವ, ಪ್ರಾರಂಭದ ಅಕ್ಷರ ಹ್ರಸ್ವವಾಗಿರುವ ಶಬ್ದಗಳಿಗೆ ಬಹುವಚನ 'ಗಳ್' ಪ್ರತ್ಯಯ ಚತುರ್ಥಿ ವಿಭಕ್ತಿಯ 'ಗೆ' ಪ್ರತ್ಯಯ ಸೇರುವಾಗ ಶಿಥಿಲತೆ ಉಂಟಾಗುತ್ತದೆ.

ಉದಾ: ಅಗಟ್+ಗಳ್= ಅಗಟ್ಗಳ್; ಎಸಟ್+ಗೆ=ಎಸಟ್ಗೆ, ಮುಗುಳ್+ಗಳ್/ಗೆ =ಮುಗುಳ್ಗಳ್; ಮುಗುಳ್ಗೆ; ತಳಿರ್+ಗಳ್/ಗೆ=ತಳಿರ್ಗಳ್; ತಳಿರ್ಗೆ.

**೨. ಸಮಾಸಗಳು:** ಪೂರ್ವಪ್ರಕೃತಿಯ ಪ್ರಾರಂಭದ ಅಕ್ಷರ ಹ್ರಸ್ವವಾಗಿದ್ದು ಅದರ ಕೊನೆಯ ಅಕ್ಷರವು ರ ಅಥವಾ ಳ ಆಗಿದ್ದರೆ ಮತ್ತು ಅವುಗಳಿಗೆ ಗದವಜ ಆದಿಯಾಗಿರುವ ಪ್ರಕೃತಿಗಳು ಸೇರಿಸಿದರೆ ಶಿಥಿಲತೆಯುಂಟಾಗುತ್ತದೆ.

ಉದಾ: ಕುಳಿರ್+ಗಾಳಿ=ಕುಳಿರ್ಗಾಳಿ, ಅಲರ್+ತೋಂಟಂ=ಅಲರ್ತೋಂಟಂ
ಮುಗುಳ್+ಕಾಯ್=ಮುಗುಳ್ಗಾಯ್, ಎಸಳ್+ಪಸೆ=ಎಸಳ್ವಸೆ ಇತ್ಯಾದಿ.

**೩. ಕ್ರಿಯಾಪದಗಳು:** ಕ್ರಿಯಾ ಪ್ರಕೃತಿಯು ಹ್ರಸ್ವಾದಿಯಾಗಿದ್ದು, ಟ,ಳ,ರ ಗಳಿಂದ ಅಂತ್ಯವಾಗಿದ್ದರೆ ಅದಕ್ಕೆ ಭೂತಕಾಲ ಪ್ರತ್ಯಯ 'ದ' ಆಗಲಿ ವರ್ತಮಾನದ ದಪ ಆಗಲಿ, ಭವಿಷ್ಯದ 'ವ' ಆಗಲಿ, ಪ್ರಥಮ ಪುರುಷದಲ್ಲಿ ವಿಧ್ಯರ್ಥದ 'ಗೆ' ಆಗಲಿ 'ಗುಂ' ಆಗಲಿ ಸೇರಿದರೆ ಶಿಥಿಲತೆ ಉಂಟಾಗುತ್ತದೆ.

ಉದಾ: ಪೊಗಟ್ + ದ / ದಪ / ವ + ಅಂ = ಪೊಗಟ್ದಂ, ಪೊಗಟ್ದಪಂ, ಪೊಗಳ್ವಂ
ಪೊಗಟ್ + ಗೆ = ಪೊಗಟ್ಗೆ ಪೊಗಟ್ + ಗುಂ = ಪೊಗಟ್ಗುಂ
ಮಗುಳ್ + ದ / ದಪ /ವ + ಅಂ = ಮಗುಳ್ದಂ, ಮಗುಳ್ದಪಂ, ಮಗುಳ್ವಂ,
ಮಸುಳ್ಗೆ, ಮಸುಳ್ಗುಂ.
ನಿಮಿರ್ + ದ / ದಪ / ವ + ಅಂ = ನಿಮಿರ್ದಂ, ನಿಮಿರ್ದಪಂ, ನಿಮಿರ್ವಂ,
ನಿಮಿರ್ಗೆ, ನಿಮಿರ್ಗುಂ.

ಮೇಲೆ ಹೇಳಲಾದ ನಿಯಮಗಳಿಗೆ ಕೆಲವು ಅಪವಾದಗಳುಂಟು. ಕಾದಲರ್ಗಳ್ ಎಂಬ ಶಬ್ದದ ಆದಿಯಲ್ಲಿ ದೀರ್ಘಾಕ್ಷರವಿದೆ. ಆದರೂ ಕೂಡ ಅದು ಶಿಥಿಲದ್ವಿತ್ವವಾಗಿದೆ.

ಹಳಗನ್ನಡದ ವ್ಯಂಜನಾಂತ ಶಬ್ದರೂಪಗಳ ವಿಚಾರವಾಗಿ ತಿಳಿಸುತ್ತಾ ಯ,ರ,ಲ,ಣ,ನ,ಳ, ಱ,ೞ, ಕಾರಗಳು ಶಬ್ದಾಂತ್ಯದಲ್ಲಿ ಬಂದಾಗ ಅರ್ಧಾಕ್ಷರಗಳಾಗಿ ನಿಲ್ಲುತ್ತವೆ ಎಂದು ಹೇಳಿದ್ದಾನೆ. ಕಯ್, ಬೇರ್, ಪಾಲ್, ಪವಣ್, ಪೊನ್, ಮಿದುಳ್, ಪೆಸಱ್, ಬಾೞ್ ಇತ್ಯಾದಿ.

## 1.9 ಪರೀಕ್ಷಾ ವಿಷಯ

### 1.9.0. ಸ್ವಪರೀಕ್ಷೆ ಪ್ರಶ್ನೆಗಳು

1. ಸವರ್ಣಗಳು ಎಂದರೇನು?

...................................................................................................

...................................................................................................

...................................................................................................

2. ಶುದ್ಧಗೆಗಳು ಕನ್ನಡದಲ್ಲಿ ಎಷ್ಟು?

...................................................................................................

...................................................................................................

...................................................................................................

3. ದೇಶೀಯಗಳು ಎಂದರೇನು?

...................................................................................................

...................................................................................................

...................................................................................................

4. ಏಕಸ್ಥಾನೀಯ ಎಂದರೇನು?

...................................................................................................

...................................................................................................

...................................................................................................

5. ಕನ್ನಡದಲ್ಲಿ ಮಹಾಪ್ರಾಣಗಳಿವೆಯೆ?

...................................................................................................

...................................................................................................

...................................................................................................

6. ನಾಮಿಗಳು ಎಂದರೇನು?

7. ಅಚ್ಚಗನ್ನಡದಲ್ಲಿ ಅಕ್ಷರಗಳು ಎಷ್ಟು?

8. ಶಿಥಿಲದ್ವಿತ್ವ ಎಂದರೇನು?

9. ಸಬಿಂದುಕ, ಅಬಿಂದುಕ ಎಂದರೇನು?

10. ಯೋಗವಾಹಗಳು ಎಷ್ಟು ತಿಳಿಸಿ

## 1.9.1. ಸ್ವಪರೀಕ್ಷೆ ಪ್ರಶ್ನೆಗಳಿಗೆ ಉತ್ತರಗಳು

1. ಸವರ್ಣಗಳು ಎಂದರೆ ಸಮಾನ ವರ್ಣಗಳು. ಸ್ವರಗಳಿಗೆ ಈ ಮಾತು ಅನ್ವಯಿಸುತ್ತದೆ. ಅಆ, ಇಈ, ಉಊ, ಋೠ ಈ ಹತ್ತು ವರ್ಣಗಳು ಸವರ್ಣಗಳಾಗಿವೆ. ಹ್ರಸ್ವದ ನಂತರ ದೀರ್ಘ ಬಂದರೂ ಒಂದೇ, ದೀರ್ಘದ ನಂತರ ಹ್ರಸ್ವ ಬಂದರೂ ಒಂದೇ. ಅಆ ಎಂಬ ಕ್ರಮದಲ್ಲಿ ಬರೆದರೆ ಅನುಲೋಮಕ್ರಮ ಎನ್ನಿಸಿಕೊಳ್ಳುತ್ತದೆ. ಆಅ ಎಂಬ ಕ್ರಮದಲ್ಲಿ ಬರೆದರೆ ವಿಲೋಮ ಕ್ರಮ ಎನ್ನಿಸಿಕೊಳ್ಳುತ್ತದೆ. ಹೇಗೆ ಬರೆದರೂ ಅವು ಸವರ್ಣಗಳು ಎನ್ನಿಸಿಕೊಳ್ಳುತ್ತವೆ.

2. ಶುದ್ಧಗೆ ಎಂಬುದು ಕೇಶಿರಾಜನ ಪರಿಭಾಷೆ. ಆತನು ಮೊದಲು 52 ಅಕ್ಷರಗಳ ಕನ್ನಡ ವರ್ಣಮಾಲೆಯನ್ನು ಸಿದ್ಧಪಡಿಸುತ್ತಾನೆ. ಅದಕ್ಕೆ ಐದು ದೇಶೀಯಗಳನ್ನು ಸೇರಿಸುತ್ತಾನೆ. ಅಲ್ಲಿಗೆ 57 ಅಕ್ಷರಗಳಾಗುತ್ತವೆ. 57ರಲ್ಲಿ ಋೠ,ಶ,ಷ, ಃ, X, ᳲ, ಮತ್ತು ಕ್ಷಳ ಎಂಬ ಹತ್ತು

ವರ್ಣಗಳನ್ನು ಕಳೆಯುತ್ತಾನೆ. ಕಡೆಗೆ 47 ಅಕ್ಷರಗಳ ವರ್ಣಮಾಲೆಯು ಸಿದ್ಧವಾಗುತ್ತೆ. ಅದನ್ನು ಕೇಶಿರಾಜನು-ಶುದ್ಧಗೆ ಎಂದು ಕರೆಯುತ್ತಾನೆ.

3. ಕೇಶಿರಾಜನು ಸಂಸ್ಕೃತದ ವರ್ಣಮಾಲೆಯ ಆದರ್ಶವನ್ನು ಇಟ್ಟುಕೊಂಡು ಕನ್ನಡ ವರ್ಣಮಾಲೆಯನ್ನು ಸಿದ್ಧಪಡಿಸಿದಾಗ ಅದರಲ್ಲಿ ಕೆಲವು ಕನ್ನಡದ ವರ್ಣಗಳು ಬಿಟ್ಟು ಹೋಗಿರುವುದು ಕಂಡು ಬಂದಿತು. ಕನ್ನಡದಲ್ಲಿ ಮಾತ್ರ ಇರುವ, ಸಂಸ್ಕೃತದಲ್ಲಿ ಇಲ್ಲದ ವರ್ಣಗಳನ್ನು ಆತನು ದೇಶೀಯ ಅಕ್ಷರಗಳು ಎಂದು ಕರೆಯುತ್ತಾನೆ. ಅವುಗಳೆಂದರೆ 'ಎ ಒ ಱ ೞ ಳ [ಕುಳ]'

4. ಕೇಶಿರಾಜನು ನಮ್ಮ ಧ್ವನ್ಯಂಗಗಳಲ್ಲಿ ಕೊರಲು, ಜಿಹ್ವಾಮೂಲ, ಉರ, ತಾಳುಗೆ, ಓಷ್ಠ, ನಾಸಿಕ, ಶಿರ, ದಂತ ಎಂಬ ಎಂಟು ಸ್ಥಾನಗಳನ್ನು ಗುರುತಿಸುತ್ತಾನೆ. ಇವುಗಳು ವರ್ಣೋತ್ಪತ್ತಿ ಸ್ಥಾನಗಳು. ಕೆಲವು ವರ್ಣಗಳು ಹೆಚ್ಚು ಕಡಿಮೆ ಒಂದೇ ಸ್ಥಳದಲ್ಲಿ ಉತ್ಪತ್ತಿಯಾಗುತ್ತವೆ. ಅವುಗಳನ್ನು ಆತನು ಏಕಸ್ಥಾನೀಯಗಳು ಎಂದು ಕರೆದಿದ್ದಾನೆ. ಉದಾಹರಣೆಗೆ ಱ ಮತ್ತು ರ, ಡ ಮತ್ತು ೞ ಮುಂತಾದವು.

5. ಕಕಾರದಿಂದ ಳಕಾರದವರೆಗೆ ಇರುವ ಅಕ್ಷರಗಳು ವ್ಯಂಜನಗಳು. ಸಾಮಾನ್ಯವಾಗಿ ವ್ಯಂಜನಗಳನ್ನು ಅರ್ಧಾಕ್ಷರಗಳೆಂದು ತಿಳಿಯಲಾಗಿದೆ. ವ್ಯಂಜನಗಳಲ್ಲಿ ಕವರ್ಗದಿಂದ ಹಿಡಿದು ಪವರ್ಗದವರೆಗೆ ಇರುವ ವರ್ಗೀಯಗಳಲ್ಲಿ ಪ್ರತಿವರ್ಗದ ಎರಡನೆಯ ಮತ್ತು ನಾಲ್ಕನೆಯ ಅಕ್ಷರಗಳನ್ನು ಮಹಾಪ್ರಾಣಾಕ್ಷರಗಳೆಂದು ಕರೆಯಲಾಗಿದೆ. ಕೇಶಿರಾಜನು 'ಒಳವು ಮಹಾಪ್ರಾಣಂಗಳ್' ಎಂದು ಹೇಳುತ್ತಾನೆ. ಆದರೆ ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಇಲ್ಲವೆಂಬುದು ಆತನಿಗೇ ತಿಳಿಯುತ್ತದೆ. ಇಂದಿನ ಭಾಷಾವಿಜ್ಞಾನಿಗಳೂ ಕೂಡ ಅಚ್ಚಗನ್ನಡದಲ್ಲಿ ಮಹಾಪ್ರಾಣಗಳು ಇಲ್ಲವೆಂದೇ ಹೇಳುತ್ತಾರೆ.

6. ಹದಿನಾಲ್ಕು ಸ್ವರಗಳಲ್ಲಿ ಮೊದಲನೆಯ ಅವರ್ಣವನ್ನು ಎಂದರೆ ಅಆ ಸಮಾನಗಳನ್ನು ತೆಗೆದು ಹಾಕಿದರೆ ಉಳಿದ ಹನ್ನೆರಡು ಸ್ವರಗಳು ನಾಮಿ ಎನ್ನಿಸಿಕೊಳ್ಳುತ್ತವೆ. ಇವುಗಳನ್ನು ದ್ವಾದಶ ಸೂರ್ಯರಿಗೆ ಹೋಲಿಸಲಾಗಿದೆ.

7. ಅಚ್ಚಗನ್ನಡ ಎನ್ನುವುದು ಭಾಷಾವಿಜ್ಞಾನಿಗಳಿಗೆ ತೋರಿದಂತೆ ಕೇಶಿರಾಜನಿಗೆ ತೋರುವುದಿಲ್ಲ. ಆತನ ಪ್ರಕಾರ ಮಹಾಪ್ರಾಣಗಳೂ ಸೇರಿದಂತೆ 47 ಅಕ್ಷರಗಳು ಕನ್ನಡದಲ್ಲಿವೆ. 'ನಾಲ್ವತ್ತೇೞುಾಯ್ತು ಳಿ ಸುದ್ಧಗೆಯಚ್ಚಗನ್ನಡಕ್ಕೆ' ಎಂದು ಹೇಳಿದ್ದಾನೆ. ಆಧುನಿಕ ವಿದ್ವಾಂಸರು ದೇಶ್ಯ ಶಬ್ದಗಳನ್ನು ಮಾತ್ರ ಪರಿಗಣಿಸಿ ಲೆಕ್ಕ ಹಾಕುತ್ತಾರೆ. ಕೇಶಿರಾಜನು ಹೇಳುವ 47 ಅಕ್ಷರಗಳಲ್ಲಿ 10 ಮಹಾಪ್ರಾಣಗಳನ್ನು ಕಳೆಯುತ್ತಾರೆ. ಆಗ 37 ಅಕ್ಷರಗಳು ಉಳಿಯುತ್ತವೆ. ಅದರಲ್ಲಿ ಪುನಃ ಐ ಮತ್ತು ಔ ಎಂಬ ಸಂಧ್ಯಕ್ಷರಗಳನ್ನು ಕಳೆಯುತ್ತಾರೆ ಮತ್ತು ಅನುಸ್ವಾರದ ಅಗತ್ಯವಿಲ್ಲ ಎನ್ನುತ್ತಾರೆ. ಈ ಮೂರೂ ಅಕ್ಷರಗಳನ್ನು ಕಳೆದರೆ ಅಚ್ಚಗನ್ನಡದಲ್ಲಿ 34 ಅಕ್ಷರಗಳು ಉಳಿಯುತ್ತವೆ.

8. ದ್ವಿತ್ವಾಕ್ಷರ ಎಂದರೆ ಒತ್ತಕ್ಷರ, ಸಂಯುಕ್ತಾಕ್ಷರ. ಒಂದೇ ಬಗೆಯ ಅಕ್ಷರಗಳಿಂದ ಉಂಟಾದ ಒತ್ತಕ್ಷರವನ್ನು ಸಜಾತೀಯ ಸಂಯುಕ್ತಾಕ್ಷರಗಳೆಂದೂ, ಭಿನ್ನವಾದ ಅಕ್ಷರಗಳಿಂದ ಉಂಟಾದ ಒತ್ತಕ್ಷರವನ್ನು ವಿಜಾತೀಯ ಸಂಯುಕ್ತಾಕ್ಷರಗಳೆಂದೂ ಕರೆಯುತ್ತಾರೆ. ಈ ಒತ್ತಕ್ಷರಗಳನ್ನು ಕವಿಗಳು ತಮ್ಮ ಅನುಕೂಲಕ್ಕೆ ಕೆಲವನ್ನು ತೇಲಿಸಿ ಉಚ್ಚರಿಸುವ ಹಾಗೆ ಸೂಚಿಸುತ್ತಾರೆ. ಇದರಿಂದ ಛಂದಸ್ಸು ಕೆಡುವುದಿಲ್ಲ. ಕೆಲವು ದ್ವಿತ್ವಗಳು ಶಬ್ದ ರಚನೆಯಲ್ಲಿಯೇ ಶಿಥಿಲತ್ವವನ್ನು ಹೊಂದಿರುತ್ತವೆ. ಉದಾಹರಣೆಗೆ ಬರ್ದಿಲ್, ಗರ್ದುಗೆ ಇತ್ಯಾದಿ. ಇನ್ನು ಕೆಲವು ವಿಶಿಷ್ಟವಾದ ರಚನೆಯುಳ್ಳ ಪದಗಳು. ಅವುಗಳು ಕೆಲವು ಸಂದರ್ಭಗಳಲ್ಲಿ ಶಿಥಿಲ ದ್ವಿತ್ವವಾಗುತ್ತವೆ. ಉದಾಹರಣೆಗೆ ಅಗಲ್ಗಿಳ್, ಮುಗುಳ್ಗೆ, ಕುಳಿರ್ಗಾಳಿ, ಪೊಗಲ್ಪಂ, ಮಸುಳ್ಗಂ ಇತ್ಯಾದಿಗಳು.

9. ಕೇಶಿರಾಜನು ಶಬ್ದಾಂತರ್ಗತ ಬಿಂದುವಿನ ವಿಚಾರವನ್ನು ಚರ್ಚಿಸಿದ್ದಾನೆ. ಹಳಗನ್ನಡದಲ್ಲಿ ಬಿಂದು ಇರುವ ಅನೇಕ ಶಬ್ದಗಳಿವೆ. ಕಾಲ ಪ್ರವಾಹದಲ್ಲಿ ಬಿಂದುಲೋಪ ಕ್ರಿಯೆಯು ನಡೆಯುತ್ತಿದ್ದುದಕ್ಕೆ ತಡೆ ಒಡ್ಡಲು ಪ್ರಯತ್ನಿಸಿದ್ದಾನೆ. ಆತನು ಅಂದಿನ ಯಥಾಸ್ಥಿತಿಯನ್ನು ವಿವರಣಾತ್ಮಕ ಭಾಷಾ ವಿಜ್ಞಾನಿಯಂತೆ ಕೂಡ ತಿಳಿಸಿದ್ದಾನೆ. ಅಡಂಗು>ಅಡಗು, ತೋಂಟ>ತೋಟ, ಇರುಂಪೆ>ಇರುಪೆ ಇತ್ಯಾದಿಗಳನ್ನು ನೋಡಬಹುದು. ಬಿಂದು ಲೋಪವಾಗಲು ಏನು ಕಾರಣ ಎಂಬುದನ್ನು ಕೇಶಿರಾಜನು ವಿವರಿಸಿಲ್ಲ. ಸ್ಥೂಲನೋಟಕ್ಕೆ ಒಂದು ಅಂಶ ಕಂಡುಬರುತ್ತದೆ. ಶಬ್ದಾದಿಯು ದೀರ್ಘ ಅಕ್ಷರದಿಂದ ಕೂಡಿದ್ದರೆ ಅದರಲ್ಲಿರುವ ಬಿಂದುವು ಕಾಲಕ್ರಮದಲ್ಲಿ ಬಿಟ್ಟುಹೋಗುತ್ತದೆಂಬುದು ಕಂಡು ಬರುತ್ತದೆ. ಶಬ್ದಾದಿಯು ಹ್ರಸ್ವವಾಗಿದ್ದರೆ ಬಿಂದುವು ಸಾಮಾನ್ಯವಾಗಿ ಉಳಿದುಕೊಳ್ಳುವುದು ಕಂಡುಬರುತ್ತದೆ. ಇದು ಒಂದು ರೀತಿಯಲ್ಲಿ ಅಂದಾಜಿನ ಮಾತು. ಕಾರಣವನ್ನು ಹುಡುಕುವುದು ಸುಲಭವಲ್ಲ. ಕೇಶಿರಾಜನು ಈ ವಿಚಾರಗಳನ್ನು ವಿಸ್ತರಿಸದಿದ್ದರೂ ಈ ರೀತಿಯಲ್ಲಿ ಕಂಡು ಕೊಂಡಿರುವುದು ಗಮನಾರ್ಹವಾದುದು.

10. ಸಂಸ್ಕೃತದಲ್ಲಿರುವ ಹಾಗೆ ಕನ್ನಡದಲ್ಲಿಯೂ ಯೋಗವಾಹಗಳು ಇರಲಿ ಎನ್ನುವುದು ಕೇಶಿರಾಜನ ಮನಸ್ಸಿನಲ್ಲಿ ಇರುವಂತೆ ಕಾಣುತ್ತದೆ. ಜೀಹ್ವಾಮೂಲೀಯ (X̣ಕ), ಉಪಧ್ಮಾನೀಯ ᳲಪ, ಬಿಂದು (ಂ) ಮತ್ತು ವಿಸರ್ಗ( ಃ ) ಇವುಗಳೇ ಯೋಗವಾಹಗಳು. ಯುಜ್ ಎಂದರೆ ಸೇರುವುದು ಎಂದು ಅರ್ಥ. [ವಹ್] ವಾಹ ಎಂದರೆ ಜೊತೆಯಲ್ಲಿ ಹೋಗುವುದು. ಯೋಗವಾಹ ಎಂದರೆ ಯಾವುದಾದರೂ ಒಂದರ (ಅಕ್ಷರದ) ಜೊತೆ ಹೋಗುವ ಸಂಜ್ಞೆ ಎಂದು ಅರ್ಥ. ಆದ್ದರಿಂದಲೇ ಯೋಗವಾಹಗಳನ್ನು ಸ್ವತಂತ್ರವಾಗಿ ಉಚ್ಚರಿಸಲು ಸಾಧ್ಯವಾಗುವುದಿಲ್ಲ. ಕನ್ನಡ ವರ್ಣಮಾಲೆಯಲ್ಲಿ ಈಗ ಬಿಂದು ಮತ್ತು ವಿಸರ್ಗಗಳಿಗೆ ಸ್ಥಾನವಿದೆ. ಜೀಹ್ವಾಮೂಲೀಯ ಮತ್ತು ಉಪಧ್ಮಾನೀಯಗಳನ್ನು ಸೇರಿಸಿಕೊಂಡಿಲ್ಲ.

### 1.9.2 ನಿಮ್ಮ ಅಭ್ಯಾಸಕ್ಕೆ

1. ನಾಗವರ್ಮ ಯಾರು?
2. ವ್ಯಾಕರಣದಿಂದ ಆಗುವ ಪ್ರಯೋಜನವೇನು?
3. ಅವರ್ಗೀಯಗಳು ಎಂದರೇನು?
4. ಆಧುನಿಕ ಭಾಷಾವಿಜ್ಞಾನಿಗಳ ಪ್ರಕಾರ ಅಚ್ಚಗನ್ನಡ ಅಕ್ಷರಗಳು ಎಷ್ಟು?
5. ಶಿಥಿಲದ್ವಿತ್ವ ಎಂದರೇನು?

# ಸಂಚಿಕೆ - 10
# ವ್ಯಾಕರಣ

## ಘಟಕ - 2
## ಸಂಧಿ ಪ್ರಕರಣ ಮತ್ತು ನಾಮ ಪ್ರಕರಣ

ಪರಿವಿಡಿ

## 2.0. ಘಟಕದ ಉದ್ದೇಶ

ಶಬ್ದಮಣಿದರ್ಪಣದ ಸಂಧಿಪ್ರಕರಣ ಮತ್ತು ನಾಮಪ್ರಕರಣಗಳಲ್ಲಿ ಕಂಡುಬರುವ ಮುಖ್ಯಾಂಶಗಳನ್ನು ವಿವರಿಸುವುದು. ಸ್ವರಸಂಧಿಗಳಾದ ಲೋಪ, ಆಗಮ ಸಂಧಿಗಳನ್ನು ಕುರಿತು ವಿಶ್ಲೇಷಿಸುವುದು. ವಿಸಂಧಿನಿಯಮಗಳನ್ನು ಗಮನಿಸುವುದು. ಸಂಧಿ ದೋಷಗಳನ್ನು ತೋರಿಸುವುದು, ದ್ವಿತ್ವ ಸಂಧಿಯನ್ನು ಸ್ಪಷ್ಟಪಡಿಸುವುದು. ನಾಮಪ್ರಕರಣದಲ್ಲಿ ರೂಢನಾಮ, ಅನ್ವರ್ಥನಾಮ, ಅಂಕಿತನಾಮಗಳ ಭೇದವನ್ನು ವಿವರಿಸುವುದು. ಕೇಶಿರಾಜನ ದೃಷ್ಟಿಯಿಂದ ತತ್ಸಮ, ತದ್ಭವ, ಸಮಸಂಸ್ಕೃತಗಳ ಮತ್ತು ಯಾವುವು ಎಂಬುದನ್ನು ತಿಳಿದುಕೊಳ್ಳುವುದು. ಲಿಂಗ ವಚನ ವಿಭಕ್ತಿ ಪ್ರತ್ಯಯಗಳನ್ನು ಮತ್ತು ಅವುಗಳ ಸ್ವರೂಪವನ್ನು ಪರಿಶೀಲಿಸುವುದು.

## 2.1. ಪೀಠಿಕೆ

ಸಾಮಾನ್ಯವಾಗಿ ಒಂದು ಭಾಷೆಯ ಜನರು ವ್ಯವಹರಿಸುವಾಗ ಭಾಷಾಶುದ್ಧಿಯ ಬಗ್ಗೆ ಅಷ್ಟೇನೂ ಗಮನವನ್ನು ಕೊಡುವುದಿಲ್ಲ. ವೈಯಾಕರಣರು ಎಷ್ಟೋ ನಿಯಮಗಳನ್ನು ತಿಳಿಸುತ್ತಾರೆ. ಕವಿಗಳು ಮತ್ತಿತರ ಶಾಸ್ತ್ರಾಧ್ಯಯನ ಮಾಡುವವರು ವ್ಯಾಕರಣಶಾಸ್ತ್ರದ ಬಗ್ಗೆ ಗಮನ ಕೊಡುತ್ತಾರೆಂದು ತಿಳಿಯುತ್ತೇವೆ. ಭಾಷೆಯನ್ನು ಆಡುವಾಗ ಇಲ್ಲದ ಹಿಂಜರಿತ ಬರೆಯುವ ಸಂದರ್ಭದಲ್ಲಿ ಉಂಟಾಗುತ್ತದೆ. ಏಕೆಂದರೆ ಮಾತು ದಾಖಲೆಯಾಗಿ ಉಳಿಯುವುದಿಲ್ಲ. ನಾವು ಮಾತನಾಡುವಾಗ ಅಕ್ಷರಗಳನ್ನು ಹಿಂಸೆಗೆ ಗುರಿಪಡಿಸುತ್ತೇವೆ. ಸಂಧಿ ಸಮಾಸ ಮುಂತಾದ ವಿಷಯಗಳ ಕಡೆ ಯಾರು ತಾನೆ ಗಮನ ಕೊಡುತ್ತಾರೆ ಒಂದು ಶೈಕ್ಷಣಿಕ ವಿಷಯವನ್ನು ಅಧ್ಯಯನ ಮಾಡುವವರು ಎಲ್ಲ ಅಂಶಗಳನ್ನೂ ಗಮನಿಸಬೇಕಾಗುತ್ತದೆ. ಅವರಿಗೆ ವ್ಯಾಕರಣದ ಬಗ್ಗೆ ಪ್ರಾಥಮಿಕ ತಿಳಿವಳಿಕೆಯಾದರೂ ಇರಲೇ ಬೇಕಾಗುತ್ತದೆ. ಇನ್ನು ಸಾಹಿತ್ಯದ ಅಭ್ಯಾಸಿಗಳಾದವರು, ವಿದ್ಯಾರ್ಥಿಗಳಾದವರು ವ್ಯಾಕರಣದ ಬಗ್ಗೆ ಸಮಗ್ರವಾಗಿಯೇ ತಿಳಿದುಕೊಳ್ಳಬೇಕಾಗುತ್ತದೆ. ವ್ಯಾಕರಣವು ದೀಪಧಾರಿಯೇ ವಿನಾ ದಂಡಧಾರಿಯಲ್ಲ. ಭಾಷಾ ನಿಯಮಗಳನ್ನು ಮೀರದಿರಲಿ ಎಂಬುದು ವೈಯಾಕರಣರ ಆಶಯವೂ ಆಗಿರುತ್ತದೆ.

## 2.2. ಸಂಧಿ ಪ್ರಕರಣ

### 2.2.0. ಸಂಧಿ ಎಂದರೇನು

ಸಂಧಿಯು ಎರಡು ಅಕ್ಷರಗಳ ನಡುವೆ ಕಾಲವಿಳಂಬವಿಲ್ಲದಂತೆ ನಡೆಯುವ ಕ್ರಿಯೆಯಾಗಿದೆ. ವ್ಯವಹಾರದಲ್ಲಿ ಕೆಲವು ಶಬ್ದಗಳನ್ನು ಬಿಡಿಸಿ ಹೇಳಲು ಹೋಗುವುದಿಲ್ಲ. ಬರಹ ಮತ್ತು ಭಾಷಣಗಳ ಭಾಷೆದೂ ಮಾತನಾಡುವ ಭಾಷೆಗೂ ತುಂಬಾ ವ್ಯತ್ಯಾಸವಿರುತ್ತದೆ. ಸಂಧಿಯ ಬಗ್ಗೆ ಈ ಕೆಳಕಂಡ ತೀರ್ಮಾನಗಳಿಗೆ ಬರಬಹುದು.

1. ಎರಡು ಅಥವಾ ಹೆಚ್ಚು ವರ್ಣಗಳು ಕಾಲ ವಿಳಂಬವಿಲ್ಲದಂತೆ ಸೇರುವುದೇ ಸಂಧಿ.
2. ಸ್ವರದ ಮುಂದೆ ಸ್ವರ ಬಂದು ಸಂಧಿಯಾದರೆ ಅದನ್ನು ಸ್ವರಸಂಧಿ ಎನ್ನುತ್ತಾರೆ.
3. ಸ್ವರದ ಮುಂದೆ ವ್ಯಂಜನ ಬಂದು ಅಥವಾ ವ್ಯಂಜನದ ಮುಂದೆ ವ್ಯಂಜನ ಬಂದು ಸಂಧಿಯಾದರೆ ವ್ಯಂಜನ ಸಂಧಿ ಎನ್ನುತ್ತೇವೆ.

## 2.3. ಸ್ವರಸಂಧಿಗಳು

### 2.3.0. ಲೋಪ ಸಂಧಿ

ಸ್ವರಾಂತವಾದ ಪ್ರಕೃತಿಗೆ ಪರವಾಗಿ ಅಥವಾ ವಿಭಕ್ತಿಗೆ ಪರವಾಗಿ ಇನ್ನೊಂದು ಸ್ವರ ಬಂದರೆ ಆಗ ಪೂರ್ವಸ್ವರಕ್ಕೆ ಲೋಪವುಂಟಾಗುತ್ತದೆ. ಪ್ರಕೃತಿಯು ದೇಶೀಯ ಶಬ್ದವಾಗಿರಬಹುದು ಅಥವಾ ಸಂಸ್ಕೃತ ಸಬ್ದವಾಗಿರಬಹುದು. ಹೀಗೆ ಲೋಪವಾಗುವಾಗ ಮೂಲಕಶಬ್ದದ ಅರ್ಥಕ್ಕೆ ಹಾನಿಯಾಗಬಾರದು.

ಸಂಸ್ಕೃತ ಪ್ರಕೃತಿ ಸ್ವರಲೋಪಕ್ಕೆ
ಬುಧ+ಅರ್ = ಬುಧರ್; ಬುಧ ಎಂಬ ಸಂಸ್ಕೃತ ಪ್ರಕೃತಿಯ ಸ್ವರ 'ಅ' ಲೋಪವಾಗಿದೆ
ಉದ್ಧತ+ಅರ್ = ಉದ್ಧತರ್; ಉದ್ಧತ ಶಬ್ದದ ಸ್ವರ 'ಅ' ಲೋಪವಾಗಿದೆ.
ದೇವ+ಎಂಬ = ದೇವೆಂಬ; ದೇವ ಶಬ್ದದ ಸ್ವರ ಲೋಪವಾಗಿದೆ.

ಕನ್ನಡ ಪ್ರಕೃತಿ ಸ್ವರಲೋಪ
ಅರಸ+ಆಳ್ = ಅರಸಾಳ್; ಪೂರ್ವಶಬ್ದದ 'ಅ' ಸ್ವರವು ಲೋಪವಾಗಿದೆ.
ಊರು+ಅಲ್ಲಿ = ಊರಲ್ಲಿ; ಪೂರ್ವಶಬ್ದದ 'ಉ' ಸ್ವರವು ಲೋಪವಾಗಿದೆ.

ಸಂಸ್ಕೃತ ವಿಭಕ್ತಿ ಸ್ವರ ಲೋಪ [ಇಲ್ಲಿ ವಿಭಕ್ತಿ ಕನ್ನಡದ್ದು]
ಈಶ್ವರನ+ಒಲವು = ಈಶ್ವರನೊಲವು; 'ಅ' ಎಂಬ ಷಷ್ಠೀ ವಿಭಕ್ತಿಯ ಸ್ವರ ಲೋಪವಾಗಿದೆ.
ಇಂದ್ರಂಗೆ+ಐರಾವತಂ = ಇಂದ್ರಂಗೈರಾವತಂ; 'ಎ' ಎಂಬ ಚತುರ್ಥಿಯ ಸ್ವರ ಲೋಪವಾಗಿದೆ.

ಕನ್ನಡ ವಿಭಕ್ತಿ ಸ್ವರಲೋಪ
ನೆಲದಿಂದೆ+ಉಣ್ಬಂ = ನೆಲದಿಂದುಣ್ಬಂ; ತೃತೀಯೆಯ 'ಎ' ಸ್ವರ ಲೋಪವಾಗಿದೆ.
ಲೇಸಿಂಗೆ+ಒಡೆಯಂ = ಲೇಸಿಂಗೊಡೆಯಂ; ಚತುರ್ಥಿಯ 'ಎ' ಸ್ವರ ಲೋಪವಾಗಿದೆ.

### 2.3.1. ಆಗಮಸಂಧಿ

ಸಂಧಿಯಾಗುವಾಗ ಅರ್ಥವು ಕೆಡಬಾರದು ಎಂಬುದು ನಿಯಮ. ಅರ್ಥವು ಕೆಡುವಂತಿದ್ದರೆ ಎರಡು ಸ್ವರಗಳ ನಡುವೆ ಬೇರೊಂದು ವರ್ಣವನ್ನು ಬಳಸಬೇಕಾಗುತ್ತದೆ. ಶಬ್ದಮಣಿದರ್ಪಣದಲ್ಲಿ ೬೩ನೇ ಸೂತ್ರ ಹೀಗಿದೆ

'ಅತ್ವದಿನಿವರ್ಣದಿಂ ಮ
ತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ
ಯತ್ವಮವಧಾರಣೆ ಪರ
ಮತ್ವಂ ಪಿಂತಾಗೆ ಷಷ್ಠಿ ನಿಯಮದೆ ಯತ್ವಂ'

ಅತ್ವದಿಂದ ಎಂದರೆ 'ಆ' ಎಂಬ ಸ್ವರದಿಂದ, ಇವರ್ಣದಿಂ ಎಂದರೆ 'ಇ ಈ' ಸ್ವರಗಳಿಂದ, ಓತ್ವದಿಂದ,

ಐತ್ವದಿಂ, ಎ ಐ ಸ್ವರಗಳಿಂದ ಕೊನೆಯಾಗುವ ಶಬ್ದಗಳ ಮುಂದೆ ಸ್ವರ ಬಂದರೆ 'ಯ' ಕಾರವು ನಡುವೆ ಬರುತ್ತದೆ. ಅದನ್ನು ಯಕಾರಾಗಮ ಸಂಧಿ ಎನ್ನಲಾಗುತ್ತದೆ. ಅದೇ ರೀತಿ ಷಷ್ಠೀ ವಿಭಕ್ತಿಯ 'ಅ' ಕಾರಕ್ಕೆ ಅವಧಾರಣೆಯ 'ಎ' ಪರವಾದರೆ 'ಯ' ಕಾರಾಗಮವಾಗುತ್ತದೆ.

ಆ+ಇರ್ದ ಪಾಟ್ಕೆಯಿಂ = ಆಯಿರ್ದ; ಕಲಿ+ಆರ್ = ಕಲಿಯಾರ್ : ಈ+ಅಲ್ = ಈಯಲ್, ತೇ+ಇಸಿದಂ = ತೇಯಿಸಿದಂ; ರೈ+ಒದವಿತ್ತು = ರೈಯೊದವಿತ್ತು, ಜೋ+ಎಂದು = ಜೋಯೆಂದು ವಿಶೇಷವಾಗಿ ಅವಧಾರಣೆಯ 'ಎ' ಬಂದಾಗ ಆತನ+ಎ = ಆತನಯೆ. ಆಧುನಿಕ ಕಾಲದಲ್ಲಿ ಅವಧಾರಣೆಗೆ ಆತನದೆ (ಕೈ), ಆತನದೆ ಕಾರು ಇತ್ಯಾದಿ ಬಳಸುತ್ತಾರೆ.

64ನೇ ಸೂತ್ರದಲ್ಲಿ ಬರುವಂತೆ ಸಂಸ್ಕೃತದ ಮತ್ತು ಕನ್ನಡದ ಅಕಾರಾಂತ ಪ್ರಕೃತಿಗಳಿಗೆ 'ಇಸು' ಪ್ರತ್ಯಯ ಸೇರುವಾಗ ಮತ್ತು ಅನುಕರಣ ಶಬ್ದಗಳ ಅಕಾರದ ಮುಂದೆ ಅನುಕರಣ ಸೂಚಕವಾದ ಸ್ವರ ಬಂದರೆ ಯಕಾರಾಗಮವಾಗುತ್ತದೆ.
ಶುದ್ಧ+ಇಸು=ಶುದ್ಧಯಿಸು (ಸಂಸ್ಕೃತ ಪ್ರಕೃತಿ)
ಮೇಳ+ಇಸು=ಮೇಳಯಿಸು (ಕನ್ನಡ ಪ್ರಕೃತಿ)
ಪಟಪಟ+ಎಂದು= ಪಟಪಟಯೆಂದು (ಅನುಕರಣ)

**ವಕಾರಾಗಮ ಸಂಧಿ:** ಸೂತ್ರ 63

ಅವತರಿಸಿರ್ಕುಮುವರ್ಣದ
ಋವರ್ಣದೋತ್ಔತ್ವದೊಳ್ ಸ್ವರಮಿರೆ ವ
ತ್ವವಿಧಾನಂ ಬಹುಳತೆಯ
ತ್ವವತ್ವದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ

ಉಊ ಋಋೂ, ಓ, ಔ ಸ್ವರಗಳಿಗೆ ಸ್ವರವು ಪರವಾದರೆ ವಕಾರಾಗಮವಾಗುತ್ತದೆ.

ಕುದು+ಉದು = ಕುದುವುದು, ಪೂ+ಇನ=ಪೂವಿನ, ಭ್ರಾತೃ+ಎ=ಭ್ರಾತೃವೆ, ಋೂ+ ಇತ್ತಂ =ಋೂವಿತ್ತಂ, ಗೋ ಇನ ಗೋವಿನ, ನೌ ಏರಿದಂ ನೌವನೇರಿದಂ. ಅದೇ ಸೂತ್ರದ ಕಡೆಯಲ್ಲಿ ಬಹುಳತೆ ಯತ್ವವತ್ವದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ. ಎಂದು ಹೇಳಲಾಗಿದೆ. ಅಂದರೆ ಕನ್ನಡದಲ್ಲಿ ಬಹುಳತೆ ಇದೆ ಅರ್ಥಾತ್ ವಕಾರಾಗಮ ಮತ್ತು ಯಕಾರಾಗಮಗಳು ಆಗದೆ ಇದ್ದರೂ ಇರಬಹುದು. ಆದರೆ ಅರ್ಥ ಮಾತ್ರ ಕೆಡಬಾರದು. ಸಂಸ್ಕೃತದಲ್ಲಿ ಹಾಗಲ್ಲ, ಏನೇ ಆಗಲಿ ಯಕಾರಾಗಮ ವಕಾರಾಗಮ ತಪ್ಪದೆ ಆಗಲೇಬೇಕು, ಐಚ್ಛಿಕವಾದುದಲ್ಲ.

ಕನ್ನಡದಲ್ಲಿ ಐಚ್ಛಿಕ ಎಂಬುದಕ್ಕೆ
ಒತ್ತೆ + ಇಟ್ಟಂ = ಒತ್ತೆಯಿಟ್ಟಂ / ಒತ್ತಿಟ್ಟಂ
ಮಾತು + ಎಲ್ಲಂ = ಮಾತುವೆಲ್ಲಂ / ಮಾತೆಲ್ಲಂ
ಸೊವಡು + ಒಂದು = ಸೊವಡುವೊಂದು / ಸೊವಡೊಂದು

ಸಂಸ್ಕೃತದಲ್ಲಿ ಐಚ್ಛಿಕ ಎಂಬುದಿಲ್ಲ. ಅಲ್ಲಿ ಕಡ್ಡಾಯ
ನದಿ + ಎಲ್ಲಂ = ನದಿಯೆಲ್ಲಂ, ದದಿ + ಇಲ್ಲದ = ದಧಿಯಿಲ್ಲದ
ವಿಧು + ಇಲ್ಲದ =ವಿಧುವಲ್ಲದ, ಮಧು + ಇದ್ದ = ಮಧುವಿದ್ದ

ಬಹುಳತೆ, ವಿಕಲ್ಪ ಮುಂತಾದ ಮಾತುಗಳು ಏನನ್ನು ಸೂಚಿಸುತ್ತವೆ. ಸಂಸ್ಕೃತದಂತೆ ಯಾಕೆ ಕನ್ನಡದಲ್ಲಿ ಕಡ್ಡಾಯವಿಲ್ಲ. ಸಂಸ್ಕೃತದಲ್ಲಿ ಬರುವ ಈ ರೀತಿಯ ಕಡ್ಡಾಯದ ವಿಧಿಗಳೇ ಅದನ್ನು ಚಲಾವಣೆಯ ಭಾಷೆಯಾಗದಂತೆ ಮಾಡಿದುದು ಈಗ ಇತಿಹಾಸ.

ಲೋಪಸಂಧಿ ಆಗಮಸಂಧಿಗಳನ್ನು ಹೇಳಿ ಬಳಿಕ ಕೇಶಿರಾಜನು ಸುದೀರ್ಘವಾಗಿ ವಿಸಂಧಿ, ಸಂಧಿದೋಷ, ಸಂಧಿವಿಕಲ್ಪ, ಶ್ರುತಿಸಹ್ಯಸಂಧಿ, ಶ್ರುತಿಕಷ್ಟಸಂಧಿ ಇತ್ಯಾದಿಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ.

### 2.3.2. ವಿಸಂಧಿ

1) ವಿಸಂಧಿ ಎಂದರೆ ಸಂಧಿಯಾಗದಿರುವುದು. ಸೂತ್ರ ೬೦ರಲ್ಲಿ ಹೇಳಿರುವಂತೆ ಎ ಏ ಒ ಓ ಎಂಬ ವರ್ಣಗಳು ಅಂತ್ಯದಲ್ಲಿ ಬಂದು ನಿಪಾತ, ಅವಧಾರಣೆ, ವಿಶಂಕೆಗಳನ್ನು ತಿಳಿಸುವ ಅವ್ಯಯಗಳ ಮುಂದೆ ಸ್ವರ ಬಂದರೆ ಸಂಧಿಯಾಗದು. ಪ್ಲುತವಿದ್ದರೂ [ಗುರುವಿಗಿಂತ ದೊಡ್ಡದು] ಸಂಧಿಯಾಗದು.

ನಿಪಾತ : ಅರಮೆ + ಅರಲ್ಪ = ಅರಮೆಅರಲ್ಪ [ಇಲ್ಲಿ ಸಂಧಿಯಾಗಿಲ್ಲ]
ಅವಧಾರಣೆ : ಕೂರ್ಪನೆ + ಆಪ್ತಂ = ಕೂರ್ಪನೆ ಆಪ್ತಂ
ವಿಶಂಕೆ : ಆನೆಯೊ + ಅದ್ರಿಯೊ = ಆನೆಯೊ ಅದ್ರಿಯೊ
ಪ್ಲುತ : ಕು ಕ್ಕೂ ಕ್ಕೋ + ಎಂಬು = ಕು ಕ್ಕೂ ಕ್ಕೋ ಎಂದು

ಇಷ್ಟಲ್ಲದೆ ಇನ್ನೂ ಕೆಲವು ಸಂದರ್ಭಗಳಲ್ಲಿ ಸಂಧಿಯಾಗದು ಎಂದು ಹೇಳಲಾಗಿದೆ. ಮೆಚ್ಚುಗೆಯನ್ನು ಆಕ್ಷೇಪವನ್ನು ತಿಳಿಸುವ ಓ ಕಾರದ ಮುಂದೆ, ಅಂಗೀಕಾರಾರ್ಥವನ್ನು ಉಳ್ಳ 'ಎಮ' ಶಬ್ದದ ಮುಂದೆ, ಆಶ್ಚರ್ಯ ಸೂಚಕ ಗಡಾ ಶಬ್ದಕ್ಕೆ ಆದೇಶವಾಗುವ ಆ ಎಂಬ ಸ್ವರದ ಮುಂದೆ ಮತ್ತು ವಿಷಾದವನ್ನು ಸೂಚಿಸುವ ಶಬ್ದಗಳ ಮುಂದೆ ಕೂಡ ಸ್ವರವು ಬಂದಾಗ ಸಂಧಿಯಾಗುವುದಿಲ್ಲ.

ಮೆಚ್ಚುಗೆ : ಏನೇನೋ + ಓದಿನ = ಏನೇನೋ ಓ ದಿನ ಪರಿ ಲೇಸು........
ಆಕ್ಷೇಪ : ಮುತ್ತಿದನೋ + ಇಂದೆ ಕೋಂಟೆ = ಮುತ್ತಿದನೋ ಇಂದೆ.........
ಎಮ ಶಬ್ದ : ಸಿಂಗಮಕ್ಕೆಮ +ಅಂಚೆಂ = ಸಿಂಗಮಕ್ಕೆಮ ಅಂಚೆಂ........
ಗಡಾ ಅರ್ಥದ 'ಆ' ಕಾರ ಪಾಲಾ + ಅಮರ್ದಾ + ಇನಿದು ಗಡಾ = ಪಾಲಾ ಅಮರ್ದಾ [ಇನಿದು ಗಡಾ
ವಿಷಾದ: ಅಯ್ಯೋ+ ಅಕ್ಕಟಾ+ ಇಂದ್ರಂಗೆ = ಅಯ್ಯೋ ಅಕ್ಕಟಾ ಇಂದ್ರಂಗೆ
ಪೊಱಗು, ಒಳಗು, ಪೊಸತು, ಪಟದು, ಎಳದು ಎಂಬ ಶಬ್ದಗಳು ಸಮಾಸವಾಗುವಾಗ ಪೊಱ, ಒಳ, ಪೊಸ, ಪಟ, ಎಳ ಎಂಬ ರೂಪಗಳನ್ನು ತಾಳಿ ಸ್ವರಕ್ಕೆ ಪರವಾದಾಗ ಸಂಧಿಯಾಗುವುದಿಲ್ಲ.

ಪೊಱ + ಅಡಿ = ಪೊಱಅಡಿ ; ಒಳ ಅಟ್ಟಂ ; ಪೊಸ ಅಡಿಕೆ, ; ಪಟ ಅಲಗು ; ಎಳ ಅಂಚೆ ಇತ್ಯಾದಿ.

ಒಂದು ಅಂಶವನ್ನು ಇಲ್ಲಿ ಗಮನಿಸಬೇಕು, ಪೊಱ, ಪೊಸ ಮುಂತಾದ ಶಬ್ದಗಳು ಪ್ರಕೃತಿ ರೂಪಗಳಾದುದರಿಂದ ಸಮಾಸದಲ್ಲಿ ಭಾಗಿಗಳಾಗಿವೆ. ಅಂದರೆ ಪೊಱಗು, ಪೊಸದು ಮುಂತಾದುವು ನಿಷ್ಪನ್ನ ರೂಪಗಳೇ ಇರಬಹುದು. ಆದ್ದರಿಂದ ಪೊಱ ಇತ್ಯಾದಿಗಳನ್ನೇ ಪ್ರಕೃತಿಗಳೆಂದು ತಿಳಿಯುವುದರಿಂದ ವಿವರಣೆ ಹೆಚ್ಚು ಬೇಕಾಗುವುದಿಲ್ಲ.

## 2. ಸಂಧಿದೋಷ

ಪೂರ್ವ ಪದಾಂತ್ಯವು ಲಘುವಾಗಿದ್ದು, ಉತ್ತರ ಪದಾದಿಯು ದ್ವಿತ್ವವಾಗಿದ್ದರೆ ಸಂಧಿ ಮಾಡುವುದು ದೋಷವಾಗುತ್ತದೆ ಎಂದು ಕೇಶಿರಾಜನು ಹೇಳಿದ್ದಾನೆ.

ಬರಿಸಿ + ಪ್ರಧಾನರಂ = ಬರಿಸಿ ಪ್ರಧಾನರಂ.

**ಸಂಧಿ ವಿಕಲ್ಪ :** ಸಂಧಿ ಕಾರ್ಯವು ನಡೆದರೂ ನಡೆಯಬಹುದು ಅಥವಾ ನಡೆಯದೆಯೂ ಇರಬಹುದು ಎಂಬುದು " ವಿಕಲ್ಪ " ದ ಅರ್ಥ. ಪದ್ಯಾರ್ಧ, ವಾಕ್ಯವೇಷ್ಟನ, ಅನುಕರಣ ಶಬ್ದಗಳ ಮುಂದೆ ಸ್ವರ ಬಂದರೆ ಸಂಧಿ ಐಚ್ಛಿಕವಾಗುತ್ತದೆ. ಕೇಶಿರಾಜನು ಇಂತಹ ಕಡೆ ವಾಸ್ತವ ಸ್ಥಿತಿಯನ್ನು ಒಪ್ಪಿಕೊಂಡು ಬರೆಯುತ್ತಾನೆ.

**ಶ್ರುತಿ ಸಹ್ಯಸಂಧಿ:** ಕಲವು ಸಂದರ್ಭಗಳಲ್ಲಿ ಸಂಧಿಯಾದರೆ ಅಸಹ್ಯವಾದ ಅರ್ಥವು ಹುಟ್ಟುವುದರಿಂದ ಅಂತಹ ಕಡೆ ಸಂಧಿಯಾಗಬಾರದು ಎಂದು ಹೇಳುತ್ತಾನೆ. ಉದಾ: ' ಬನ್ನಿಯ ತರು ಡಕ್ಕೆಗೆ ' ಎನ್ನುವಾಗ ಶಬ್ದಗಳ ಜೋಡಣೆಯಿಂದಾಗಿ ಅಸಹ್ಯೋಕ್ತಿಯು ಹುಟ್ಟುವುದನ್ನು ಗಮನಿಸಬಹುದು. ಇಂತಹ ಹಲವು ನಿದರ್ಶನಗಳನ್ನು ಕೇಶಿರಾಜನು ಕೊಟ್ಟಿದ್ದಾನೆ.

**ಶ್ರುತಿ ಕಷ್ಟ ಸಂಧಿ:** ಶ್ರುತಿ [ಅ] ಸಹ್ಯ ಸಂಧಿಯಲ್ಲಿ ಅರ್ಥವು ಅಶ್ಲೀಲವೆಂದು ತೋರಿದರೆ ಶ್ರುತಿ ಕಷ್ಟಸಂಧಿಯಲ್ಲಿ ಉಚ್ಚಾರಣೆಯ ತೊಂದರೆ ಮುಖ್ಯವಾಗುತ್ತದೆ. ಎರಡು ರೇಫೆಗಳನ್ನು ಒಟ್ಟುಗೂಡಿಸಿದರೆ ಉಚ್ಚರಿಸಲು ಮತ್ತು ಕೇಳಿಸಿಕೊಳ್ಳಲು ಕಷ್ಟವಾಗುತ್ತದೆ. ಎರಡಕ್ಕಿಂತ ಹೆಚ್ಚಾದ ದ್ವಿತ್ವಗಳಿದ್ದಲ್ಲಿಯೂ ಅದು ಇನ್ನೂ ಕಷ್ಟವಾಗುತ್ತದೆ. ಉದಾಹರಣೆಗೆ ಬಂದರ್ ರಾಮರ್ ಬಂದರ್ರಾಮರ್, ವಿದ್ವಿಟ್ಸ್ತ್ರೀಯರ್ ಇತ್ಯಾದಿ.

## 2.4. ವ್ಯಂಜನ ಸಂಧಿ

ಸ್ವರಸಂಧಿಯಲ್ಲಿ ಸ್ವರಕ್ಕೆ ಸ್ವರವು ಪರವಾಗುತ್ತದೆ. ಸಂಧಿಕಾರ್ಯದಲ್ಲಿ ವ್ಯಂಜನವಿದ್ದಾಗ ನಡೆಯುವ ಕೆಲವು ವ್ಯತ್ಯಾಸಗಳನ್ನು ಕೇಶಿರಾಜನು ಸಂಗ್ರಹವಾಗಿ ತಿಳಿಸಿದ್ದಾನೆ. ಇಲ್ಲಿ ಆದೇಶ ಸಂಧಿ ಮತ್ತು ದ್ವಿತ್ವ ಸಂಧಿಗಳನ್ನು ವಿವರಿಸುತ್ತಾನೆ.

ಇರೆ ವರ್ಗ ಪ್ರಥಮಂಗಳ್
ಪರದೊಳ್ ಚಟವರ್ಗಮುೞಿಯೆ ತಮ್ಮ ತೃತೀಯಾ
ಕ್ಷರಮಕ್ಕುಂ ಪದವಿಧಿಯೊಳ್
ಪರಿಹರಿಸಲ್ಬಾರದಲ್ಲಿ ಬಹುಳ ಸ್ಥಿತಿಯಂ. (75)

ಚ ವರ್ಗ ಮತ್ತು ಟ ವರ್ಗಗಳನ್ನು ಬಿಟ್ಟು, ಕ, ತ, ಪ ಗಳಿದ್ದರೆ ಅವು ಕ್ರಮವಾಗಿ ಗ, ದ, ಬ, ಗಳಾಗುತ್ತವೆ. ಒಮ್ಮೊಮ್ಮೆ ಕ, ತ, ಪ ಗಳು ಬದಲಾಗದೆ ಉಳಿಯಬಹುದು.

ಪಟ + ಕನ್ನಡಂ = ಪಟಗನ್ನಡಂ, ಕಣ್ + ತೆರವು =ಕಣ್ದೆರವು, ತಣ್ + ಪುಟಿಲ್ = ತಣ್ಬುಟಿಲ್. ಈ ನಿಯಮವನ್ನು ಮೀರಿ ಇರುವಂತಹ ನಿದರ್ಶನಗಳನ್ನು ನೋಡಬಹುದು. ಕಡು + ಚಾಗಿ = ಕಡುಚಾಗಿ, ತಲೆ + ಕಟ್ಟು = ತಲೆಕಟ್ಟು ; ಒಳ+ ಕಯ್ = ಒಳಕಯ್ ಇತ್ಯಾದಿಗಳು.

ಪೂರ್ವಪದದಲ್ಲಿ ಒರ್, ಇರ್ ಎಂಬುವು ಇದ್ದರೆ, ಱ ಕಾರದ ಆದೇಶವಾಗಿ ರ ಕಾರವಿದ್ದರೆ, ಡ ಕಾರಕ್ಕೆ ಆದೇಶವಾಗಿ ಟ ಕಾರವಿದ್ದರೆ, 'ಕತಪ' ಗಳು 'ಗದಬ' ಗಳಾಗುವುದಿಲ್ಲ.
ಉದಾಹರಣೆಗೆ : ಒರ್ + ಕೈಸು = ಒರ್ಕೈಸು, ಒರ್ತುತ್ತು, ಒರ್ಪಿಡಿ, ಏರ್+ ಪೆತ್ತರ್ = ಏರ್ಪೆತ್ತರ್, ಕಾಡು+ ಕಿಚ್ಚು = ಕಾಟ್ಕಿಚ್ಚು ಇತ್ಯಾದಿ.

ಪೂರ್ವಪದಾಂತ್ಯದಲ್ಲಿ ಸಹಜ ಸ್ವರಗಳೂ ಸಹಜ ವ್ಯಂಜನಗಳೂ ಇದ್ದು ಅವುಗಳಿಗೆ ಪ ವರ್ಗವು ಪರವಾದರೆ, 'ಪ ' ಕ್ಕೆ ಆದೇಶವಾಗಿ 'ವ' ಬರುತ್ತದೆ. ಸಹಜ ಸ್ವರಕ್ಕೆ ಉದಾ: ಎಳ+ಪೆಱೆ = ಎಳವೆಱೆ, ಎಳ + ಬಳ್ಳಿ = ಎಳವಳ್ಳಿ. ಸಹಜ ವ್ಯಂಜನಕ್ಕೆ ಉದಾ: ಬಾಯ್+ ಪಱೆ = ಬಾಯ್ವಱೆ, ಬೇರ್ ಬೆರಸಿ = ಬೇರ್ವೆರಸಿ ; ಮೆಲ್ + ಮಾತು = ಮೆಲ್ವಾತು.

ಪೂರ್ವಪದಾಂತ್ಯದಲ್ಲಿ 'ಯ' ಮತ್ತು 'ದ' ಗಳನ್ನು ಬಿಟ್ಟು ಉಳಿದ ವ್ಯಂದನಗಳಿಗೆ ಎದುರಾಗಿ 'ಸ' ಕಾರ ಬಂದರೆ ಆ ಸಕಾರಕ್ಕೆ ಚಕಾರವೂ, ಕೆಲವೆಡೆಗಳಲ್ಲಿ ಜ ಕಾರವೂ, ಸಂಖ್ಯೆಯಾಗಿದ್ದರೆ ಛ ಕಾರವೂ ಆದೇಶವಾಗುತ್ತವೆ.
ಉದಾ: ನುಣ್ + ಸರ = ನುಣ್ಚರ, ಇನ್ + ಸರ = ಇಂಚರ, ಪೊನ್ + ಸುರಿಗೆ = ಪೊಂಜುರಿಗೆ, ಎಣ್ + ಸಾಸಿರ= ಎಣ್ಛಾಸಿರ
ಆದರೆ ಯಕಾರ ಲಕಾರಗಳು ಇದ್ದರೆ ಮೇಲೆ ಹೇಳಿದ ಬದಲಾವಣೆಗಳು ಉಂಟಾಗುವುದಿಲ್ಲ. ಬಾಯ್ +ಸವಿ= ಬಾಯ್ಸವಿ, ಬಲ್ + ಸೊನೆ = ಬಲ್ಸೊನೆ ಇತ್ಯಾದಿ.

## 2.4.0. ದ್ವಿತ್ವ ಸಂಧಿ

ವ್ಯಂಜನಗಳು ಸಂಧಿಯಾಗುವಾಗ ಹೇಗೆ ದ್ವಿತ್ವವಾಗುತ್ತವೆ ಎಂಬುದನ್ನು ಕೆಲವು ಸೂತ್ರಗಳಲ್ಲಿ ವಿವರಿಸಿದ್ದಾನೆ.

ಪೂರ್ವ ಪದದ ಪ್ರಾರಂಭದಲ್ಲಿ ಹ್ರಸ್ವವೂ ಏಕವೂ ಆದ ಸ್ವರವಿದ್ದರೆ, ನ, ಣ, ಲ, ಯ, ಳ ಕಾರಗಳಲ್ಲಿ ಒಂದು ಅಂತ್ಯದಲ್ಲಿದ್ದರೆ, ಉತ್ತರ ಪದದ ಆದಿಯಲ್ಲಿ ಸ್ವರವಿದ್ದರೆ ಪೂರ್ವಪದದ ಅಂತ್ಯ ವ್ಯಂಜನವು ದ್ವಿತ್ವರೂಪವನ್ನು ತಾಳುತ್ತದೆ. [ಪೂರ್ವಪದವು ಆದಿ ದೀರ್ಘವಾಗಿಯೋ, ಅವ್ಯಯವಾಗಿಯೋ, ಅನೇಕಾಕ್ಷರಗಳಿಂದ ಕೂಡಿಯೋ ಇದ್ದರೆ ದ್ವಿತ್ವ ಉಂಟಾಗುವುದಿಲ್ಲ]

ಮೇಲಿನ ನಿಯಮಕ್ಕೆ ಉದಾಹರಣೆ:
ಪೊನ್+ ಉಳ್ಳವನ್ = ಪೊನ್ನುಳ್ಳವನ್, ತಣ್ + ನೆಟಲ್ = ತಣ್ಣೆಟಲ್

ಕಲ್ + ಎಲ್ಲಂ = ಕಲ್ಲೆಲ್ಲಂ ; ಮೆಯ್ + ಅನ್ನು = ಮೆಯ್ಯನ್ನು

ಕಳ್ + ಆಟಂ = ಕಳ್ಳಾಟಂ.

ದೀರ್ಘಾದಿ ಸ್ವರ ಇದ್ದರೆ ದ್ವಿತ್ವವಾಗುವುದಿಲ್ಲ, ಅನೇಕಾಕ್ಷರವಿದ್ದರೂ ದ್ವಿತ್ವ ಘಟಿಸದು. ಉದಾಹರಣೆಗೆ

ಬಾನ್ + ಉದ್ದ = ಬಾನುದ್ದಂ, ಏಣ್ + ಉಂಟು = ಏಣುಂಟು

ಕಲಿದಲ್+ ಇವಂ = ಕಲಿದಲಿವಂ, ಸವಣ್ + ಆರ್ = ಸವಣಾರ್

ಒಂದು ವಿಶೇಷವೆಂದರೆ 'ಇನ್' ಎಂಬ ಅವ್ಯಯಕ್ಕೆ ಸ್ವರ ಪದಪಾದಾಗ ದ್ವಿತ್ವ ಉಂಟಾಗಿದೆ. ಇದು ನಿಯಮಕ್ಕೆ ಸಲ್ಲದಿದ್ದರೂ ಆಗಿ ಹೋಗಿರುವುದನ್ನು ಕೇಶಿರಾಜನು ಒಪ್ಪಿಕೊಳ್ಳುವ ಕಲಾವಂತಿಕೆಯನ್ನು ತೋರಿಸಿದ್ದಾನೆ. ಇನ್ ಆವುದು ಇನ್ನಾವುದು ಎಂಬ ನಿದರ್ಶನವನ್ನು ಕೊಟ್ಟಿದ್ದಾನೆ.

ಧಾತುಗಳಿಗೆ ಸ್ವರ ಪರವಾದಾಗಲೂ ದ್ವಿತ್ವವು ಸಂಭವಿಸುತ್ತದೆ ಎಂಬುದನ್ನು ಮುಂದೆ ವಿವರಿಸಿದ್ದಾನೆ. ನ, ಣ, ಲ, ಯ, ಳ ವರ್ಣಗಳು ಇಲ್ಲಿಯೂ ಬರುತ್ತವೆ. ಈ ವರ್ಣಗಳಿಂದ ಅಂತ್ಯವಾದ ಧಾತುಗಳ ಮುಂದೆ ಸ್ವರ ಪರವಾದಾಗ ನಡೆಯುವ ಪ್ರಕ್ರಿಯೆಯನ್ನು ತಿಳಿಸುತ್ತಾನೆ, ಆದರೆ ಇಲ್ಲಿಯೂ ಕೆಲವು ವಿನಾಯಿತಿಗಳು ಕಂಡು ಬರುತ್ತವೆ. ಈ ಧಾತುಗಳ ಮುಂದೆ ಅಲ್ ಎಂಬುದು ಬಂದರೆ ವ್ಯಂದನ ದ್ವಿತ್ವವು ಉಂಟಾಗುವುದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಅಲ್ ಬಂದರೂ ಕೂಡ ದ್ವಿತ್ವರೂಪವಾಗುವ ನಿದರ್ಶನಗಳಿವೆ, ಯ ಬಂದಾಗ ವಿಕಲ್ಪವೂ ಇದೆ.

ಮೊದಲು 'ಅಲ್' ಪರವಾದಾಗ: ಎನ್+ಅಲ್ = ಎನಲ್, ಉಣ್ + ಅಲ್= ಉಣಲ್,

ಕಳ್ + ಅಲ್ = ಕಳಲ್, ಕೊಲ್ + ಅಲ್= ಕೊಲಲ್.

ವಿಕಲ್ಪಕ್ಕೆ ಉದಾಹರಣೆ: ಪೊಯ್ + ಅಲುಂ = ಪೊಯಲುಂ / ಪೊಯ್ಯಲುಂ ; ಗೆಯ್ + ಅಲುಂ = ಗೆಯಲುಂ,/ ಗೆಯ್ಯಲುಂ.....

ಇಷ್ಟನ್ನು ಬಿಟ್ಟರೆ ಉಳಿದ ಕಡೆ ದ್ವಿತ್ವವು ಬರುವುದನ್ನು ನೋಡಬಹುದು.

ಉದಾ: ಉಯ್+ ಅಲುಂ = ಉಯ್ಯಲುಂ, ಉಯ್ಯಂ, ಸುಯ್ಯಲುಂ, ಬಯ್ಯಲುಂ, ಬಯ್ಯೆವು, ನೆಯ್ಯಲುಂ, ನೆಯ್ಯಂ ಇತ್ಯಾತಿ.

ಇವಲ್ಲದೆ ಇನ್ನೂ ಹಲವು ಕಡೆ ವಿನಾಯಿತಿ ದೊರೆತಿರುವುದೂ ಕಂಡುಬರುತ್ತದೆ. ಹಾಗೆ ವಿನಾಯಿತಿ ಕೊಡದಿದ್ದರೆ ಕವಿಗಳು ತಮ್ಮ ದಾರಿಯನ್ನೇ ಹಿಡಿದು ಬಿಡುತ್ತಾರೆ ಎಂಬ ಅಳುಕು ಶಾಸ್ತ್ರಕಾರನಿಗೆ ಇದೆ. ಅದರಲ್ಲೂ ಕೇಶಿರಾಜನು ಮಾತ್ರ ತುಂಬಾ ವಿನಾಯಿತಿಕೊಡುತ್ತಾನೆ. ಕಳದೆ ಎಂಬ ರೂಪವನ್ನು ನೋಡಿದಾಗ ಕೇಶಿರಾಜನಿಗೆ ತಾನು ಕೊಡುತ್ತಿರುವ ರಿಯಾಯಿತಿ ವಿನಾಯಿತಿಗಳು ಅತಿಯಾದುವು ಎನ್ನಿಸಿದರೂ ಏನೂ ಮಾಡಲಾಗಲಿಲ್ಲ.

ನಣಲಯಳ ವರ್ಣಗಳು ಮಾತ್ರ ಎಲ್ಲ ನಿದರ್ಶನಗಳಲ್ಲಿಯೂ ನಿತ್ಯವಾಗಿವೆ. ಬೇರೆ ವರ್ಣಗಳನ್ನು ಆರಿಸಿಕೊಂಡಿಲ್ಲ. ಇತರೆ ವರ್ಣಗಳು ಈ ನಿಯಮಕ್ಕೆ ಒಳಗಾಗುವುದಿಲ್ಲ. ಸಾಧಾರಣೀಕರಣವಾಗದಿದ್ದರೆ ನಿಯಮವು ಸಾರ್ವತ್ರಿಕವಾಗಲಾರದೆಂದು ಆತನು ತಿಳಿದಿದ್ದಾನೆ. ಈ ವರ್ಣಗಳಿಂದ ಕೊನೆಯಾಗುವ ಶಬ್ದಗಳ ಮುಂದೆ ಆಖ್ಯಾತ ವಿಭಕ್ತಿ ಮತ್ತು ಭೂತಕಾಲ ನಿಷೇಧಾರ್ಥದ ಅದೆ ಎಂಬುದು ಪರವಾದಾಗ ದ್ವಿತ್ವವು ಉಂಟಾಗುತ್ತದೆ.

ಉದಾ: ಎನ್ + ಅಂ /ಅದೆ = ಎನ್ನಂ/ ಎನ್ನದೆ. ಉಣ್ = ಅಂ / ಅದೆ = ಉಣ್ಣಂ = ಉಣಣದೆ ಮೆಲ್ + ಅಯ್= ಅದೆ = ಮೆಲ್ಲಯ್ / ಮೆಲ್ಲದೆ. ಬಯ್ + ಎನ್ / ಅದೆ = ಬಯ್ಯೆನ್ / ಬಯ್ಯದೆ ; ಕೊಳ್ + ಎನ್ / ಅದೆ = ಕೊಳ್ಳೆನ್ / ಕೊಳ್ಳದೆ. ಇಲ್ಲಿಯೂ ಕೂಡ ಅಪವಾದ =(exception) ಇರುವುದನ್ನು ಕಾಣುತ್ತೇವೆ.

ಕಳ್+ ಅಲ್ = ಅದೆ/ ಅಂ = ಕಳದೆ / ಕಳಲ್ / ಕಳಂ

ಒಟ್ಟಿನಲ್ಲಿ ಕೇಶಿರಾಜನು ಪ್ರಯೋಗಗಳನ್ನು ಅವಲಂಬಿಸಿ ಸಾಮಾನ್ಯ ನಿಯಮಗಳನ್ನು ಸೂತ್ರರೂಪದಲ್ಲಿ ಹೇಳಿರುವ ಕ್ರಮವು ವಿಚಾರಪೂರ್ಣವಾದುದು. ಆತನು ಕೊಡುವ ಅಪವಾದಗಳನ್ನು ನೇರವಾಗಿ ಅಂಜದೆ, ಹಿಂಜರಿಯದೆ ಹೇಳುತ್ತಾನೆ. ಅವುಗಳನ್ನು ಕಡ್ಡಾಯ ಮಾಡದೆ ಬಿಟ್ಟಿರುವುದು ಆತನ ವೈಚಾರಿಕತೆಯನ್ನು ತೋರಿಸುತ್ತದೆ. ಭಾಷಾವಿಜ್ಞಾನಿಗಳು ಹೊಂದಿರುವ ನಮ್ಯಗುಣವನ್ನು ಕೇಶಿರಾಜನು ಪ್ರಕಟಿಸುತ್ತಿರುವುದು ಆತನನ್ನು ಶ್ರೇಷ್ಠ ವೈಯಾಕರಣನನ್ನಾಗಿಸಿದೆ. ಹೀಗೆ ಉಚ್ಚರಿಸಿದರೆ ಇಂತಹ ಶಿಕ್ಷೆಯಾಗುತ್ತದೆ ಎಂದೋ, ನರಕಕ್ಕೆ ಹೋಗಬೇಕಾಗುತ್ತದೆ ಎಂದೋ ಆತನು ಎಲ್ಲಿಯೂ ಹೇಳಿಲ್ಲ. ತಾನು ಹೇಳಿದ್ದೇ ವೇದವಾಕ್ಯ ಎಂದೂ ಕೂಡ ಆತನು ವಾದಿಸಿಲ್ಲ.

## 2.5 ನಾಮಪ್ರಕರಣ

ಕೇಶಿರಾಜನು ಇಲ್ಲಿ ನಾಮಪದದ ಸ್ವರೂಪವನ್ನು ನಮಗೆ ವಿವರಿಸುತ್ತಾನೆ. ನಾಮ ಪದದ ಪ್ರಯೋಗಗಳನ್ನು ಮತ್ತು ಅದು ಪಡೆಯುವ ಪ್ರತ್ಯಯಗಳ ರೂಪವನ್ನು ಇಲ್ಲಿ ವಿಶ್ಲೇಷಿಸಿದ್ದಾನೆ. ಇದು ಬಹುದೊಡ್ಡ ಅಧ್ಯಾಯವಾಗಿದೆ. ಪ್ರಪಂಚದಲ್ಲಿ ನಾಮ ಪದವೇ ಅತ್ಯಂತ ಮುಖ್ಯವಾದುದಲ್ಲವೆ? ಕ್ರಿಯೆಯನ್ನು ನಿಶ್ಶಬ್ದವಾಗಿ ಸೂಚಿಸುವ ಸಾಧ್ಯತೆಯು ಹೆಚ್ಚಾಗಿದೆ. ಆದರೆ ನಾಮಪದಗಳ ವೈವಿಧ್ಯತೆಯನ್ನು ನೋಡಿದರೆ, ಕಿವುಡು ಮೂಗರ ಸನ್ನೆಗಳನ್ನು ನೋಡಿದಾಗ ಅದರ ಸಂಕೀರ್ಣತೆ ಕಂಡುಬರುತ್ತದೆ. ಇದೇ ಅಧ್ಯಾಯದಲ್ಲಿ ಗುಣವಾಚಕ ಮತ್ತು ಸರ್ವನಾಮಗಳ ವಿಷಯವನ್ನು ಸೇರಿಸಿದ್ದಾನೆ. ಆದ್ದರಿಂದ ಇದು ಅತ್ಯಂತ ಮುಖ್ಯವೂ, ದೊಡ್ಡದೂ ಆಗಿ ಪರಿಣಮಿಸಿದೆ. ಇದನ್ನು ನಿಮಗೆ ಹೇಳಬೇಕಾದರೆ ಕರಿಯಂ ಕನ್ನಡಿಯೊಳ್ ತೋರ್ಪಂತೆ (ಆನೆಯನ್ನು ಕನ್ನಡಿಯಲ್ಲಿ ತೋರಿಸಿದಂತೆ) ಮಾಡಬೇಕಾಗುತ್ತದೆ.

### 2.5.0. ಲಿಂಗ ಎಂದರೇನು

ಸಾಮಾನ್ಯವಾಗಿ ಲಿಂಗ ಎಂದರೆ ಇಂಗ್ಲಿಷಿನಲ್ಲಿ ಯಾವುದನ್ನು ಎಂದು ಹೇಳುತ್ತಾರೋ ಅದು ಎಂದು ತಿಳಿಯಲಾಗುತ್ತದೆ. ಪುಲ್ಲಿಂಗ, ಸ್ತ್ರೀ ಲಿಂಗ, ನಪುಂಸಕಲಿಂಗ ಎಂಬ ಶಬ್ದಗಳನ್ನು ಕೇಳಿದವರಿಗೆ ಅಂತಹುದೇ ಕಲ್ಪನೆ ಉಂಟಾಗಿ ಆಶ್ಚರ್ಯವಿಲ್ಲ. ಕೇಶಿರಾಜನು 'ಲಿಂಗ' ಎಂಬುದನ್ನು ಬೇರೆ ಅರ್ಥದಲ್ಲಿ ಪ್ರಯೋಗಿಸಿರುವುದು ಕಂಡುಬರುತ್ತದೆ. ಆತನ ಪ್ರಕಾರ ಕ್ರಿಯಾಪದವಲ್ಲದ, ವಿಭಕ್ತಿಯನ್ನು ಒಳಗೊಳ್ಳದ, ಅರ್ಥವಿರುವ ಶಬ್ದವೇ ಲಿಂಗ. ಪ್ರಕೃತಿ ಎಂಬ ಶಬ್ದಕ್ಕಿಂತಲೂ ಇದು ಬೇರೆಯೇ ಆಗುತ್ತದೆ. ಪ್ರಕೃತಿ ಎಂದರೆ ಅತ್ಯಂತ ಚಿಕ್ಕದಾದ, ಅರ್ಥವನ್ನು ಹೊಂದಿರುವ ಒಂದು ಶಬ್ದವಾಗಿದೆ. ಲಿಂಗ ಎನ್ನುವುದು

ಒಂದಕ್ಕಿಂತ ಹೆಚ್ಚು ಪ್ರಕೃತಿ ಅಥವಾ ಪ್ರತ್ಯಯ ಹೊಂದಿರಬಹುದು. ಆದರೆ ವಿಭಕ್ತಿ ಪ್ರತ್ಯಯವು ಸೇರುವ ಮೊದಲು ಪ್ರಕೃತಿಯು ಯಾವ ರೂಪವನ್ನು ತಾಳುವುದೋ ಅದನ್ನು ಕೇಶಿರಾಜನು 'ಲಿಂಗ' ಎಂದು ಕರೆಯುತ್ತಾನೆ.

ಇವರಲ್ಲಿ ಕೃಲ್ಲಿಂಗ, ತದ್ಧಿತಲಿಂಗ, ಸಮಾಸಲಿಂಗ, ನಾಮಲಿಂಗ ಎಂದು ನಾಲ್ಕು ವಿಧ ಅಥವಾ ಭೇದ ಕಂಡು ಬರುತ್ತವೆ. ಇವುಗಳಲ್ಲಿ ನಾಮಲಿಂಗ ಎಂಬುದು ತುಂಬಾ ಚಿಕ್ಕದು. ಅರಸ, ಹರಿಮ ಮುಂತಾದ ಶಬ್ದಗಳನ್ನು ಅರ್ಥಕೆಡದಂತೆ ಒಡೆಯಲು ಸಾಧ್ಯವಾಗುವುದಿಲ್ಲ. ಇವು ಅತ್ಯಂತ ಚಿಕ್ಕ ಘಟಕಗಳು. ಇವುಗಳ ಮೇಲೆ ವಿಭಕ್ತಿ ಸೇರಿದರೆ ನಾಮಪದಗಳಾಗುತ್ತವೆ. ನಾಮಲಿಂಗವನ್ನು ಬಿಟ್ಟ ಉಳಿದವು ಸ್ವಲ್ಪ ಬೇರೆ ಸ್ವರೂಪವನ್ನು ತಾಳುತ್ತವೆ. ಏಕೆಂದರೆ ಇವುಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿದರೆ ನಾಮಪದದ ಕರ್ತವ್ಯವನ್ನು ಮಾಡುತ್ತವೆ. ಕೃದಂತಕ್ಕೆ, ತದ್ಧಿತಾಂತಕ್ಕೆ ವಿಭಕ್ತಿಪ್ರತ್ಯಯಗಳನ್ನು ಸೇರಿಸಿದಾಗ ಪೂರ್ಣರೂಪದ ನಾಮಪದಗಳಾಗುತ್ತವೆ. ಸಮಾಸಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರಿದ ಬಳಿಕ ಅವುಗಳಿಗೆ ವಾಕ್ಯದಲ್ಲಿ ಸ್ಥಾನವು ಸಿಗುತ್ತದೆ. ಈ ಮೂರು ಬಗೆಗಳು ಉಂಟಾಗುವ ರೀತಿಯನ್ನು ಗಮನಿಸಬೇಕು. ಮೂಲ ಪ್ರಕೃತಿಯ ಮೇಲೆ ಕೆಲವು ನಿಯತವಾದ ಪ್ರತ್ಯಯಗಳೋ ಅಥವಾ ಪ್ರಕೃತಿಗಳೋ ಸೇರಿ ಅವು ಲಿಂಗವಾಗುತ್ತವೆ.

ಕೃಲ್ಲಿಂಗಗಳನ್ನು ನೋಡೋಣ : ಮಾಡಿದಂ, ಮಾಡಿದನಂ, ಮಾಡಿದನಿಂ, ಮಾಡಿದಂಗೆ, ಮಾಡಿದನತ್ತಣಿಂ, ಮಾಡಿದನ, ಮಾಡಿದನೊಳ್ ಎಂಬ ಪದಗಳನ್ನು ನೋಡಿ. ಸಪ್ತವಿಭಕ್ತಿಗಳೂ ಕೃಲ್ಲಿಂಗಗಳಿಗೆ ಸೇರಿವೆ. ಈಗ ಕೃಲ್ಲಿಂಗ ಯಾವುದು ಎಂಬುದನ್ನು ತಿಳಿಯೋಣ. ಕ್ರಿಯಾ ಪ್ರಕೃತಿ ಸಂಬಂಧವಾಗಿದ್ದು ಭೂತ ಮತ್ತು ಭವಿಷ್ಯತ್ ಕಾಲಗಳಲ್ಲಿ ವ್ಯವಹರಿಸಬಹುದಾದುದು ಕೃಲ್ಲಿಂಗ. ಇವುಗಳಲ್ಲಿ ಕಾಲಸೂಚಕಗಳನ್ನು ಹಾಗೇ ಇಟ್ಟು ಆಖ್ಯಾತ ಪ್ರತ್ಯಯಗಳನ್ನು ತೆಗೆದುಹಾಕಿದರೆ ಕೃಲ್ಲಿಂಗ ಸಿಗುತ್ತದೆ. ಮೇಲೆ ಹೇಳಲಾದ ಮಾಡಿದಂ ಎಂಬ ಶಬ್ದದಲ್ಲಿ ಮಾಡು ಎಂಬುದು ಧಾತು. ದ ಎಂಬುದು ಕಾಲಸೂಚಕ ಪ್ರತ್ಯಯ. ಅಂ ಎಂಬುದು ಆಖ್ಯಾತ ಪ್ರತ್ಯಯ. ಮಾಡಿದಂ ಎಂಬುದು ಪೂರ್ಣ ಸ್ವರೂಪದ ಭೂತಕಾಲ ಕ್ರಿಯಾರೂಪವಾಗಿದೆ. ಇದರಲ್ಲಿ 'ಅಂ' ಎಂಬುದನ್ನು ತೆಗೆದರೆ 'ಮಾಡಿದ' ಎಂಬ ಶಬ್ದ ಸಿಗುತ್ತದೆ. ಇದೇ ಕೃಲ್ಲಿಂಗ. ಇದಕ್ಕೆ ಸಪ್ತ ವಿಭಕ್ತಿ ಪ್ರತ್ಯಯಗಳನ್ನೂ ಹಚ್ಚಬಹುದೆಂದು ಮೇಲೆ ನೋಡಿದ್ದೀರಿ.

ತದ್ಧಿತಲಿಂಗ : ಮೊದಲು ತದ್ಧಿತಾಂತ ಶಬ್ದವನ್ನು ತೆಗೆದುಕೊಳ್ಳಿ. ಉದಾಹರಣೆಗೆ 'ಮಡಿವಳಂ' ಇದರಲ್ಲಿ ಮಡು ಎಂಬುದು ನಾಮಪ್ರಕೃತಿ. ವಳ ಅಥವಾ ವಳ್ಳ ಎಂಬುದು ತದ್ಧಿತ ಪ್ರತ್ಯಯ. ಅಂ ಎಂಬುದು ಆಖ್ಯಾತ ಪ್ರತ್ಯ. ಎಲ್ಲವೂ ಸೇರಿ ತದ್ಧಿತನಾಮ ಅಥವಾ ತದ್ಧಿತಾಂತ ಎನ್ನನಿಸಿಕೊಳ್ಳುತ್ತದೆ. ಇದರಲ್ಲಿ ಆಖ್ಯಾತ ಪ್ರತ್ಯಯ ಅಂ ಅನ್ನು ತೆಗೆದರೆ 'ಮಡಿವಳ' ಎಂಬುದು ಉಳಿಯುತ್ತದೆ. ಇದು ತದ್ಧಿತಲಿಂಗ ಎನ್ನಿಸಿಕೊಳ್ಳುತ್ತದೆ. ಈ ಶಬ್ದಕ್ಕೆ ಮಡಿವಳಂ, ಮಡಿವಳನಂ, ಮಡಿವಳನಿಂ, ಮಡಿವಳಂಗೆ, ಮಡಿವಳನತ್ತಣಿಂ, ಮಡಿವಳನ, ಮಡಿವಳನೊಳ್ ಎಂದು ವಿಭಕ್ತಿ ಪ್ರತ್ಯಯಗಳನ್ನು ಹಚ್ಚಬಹುದು.

ಸಮಾಸಲಿಂಗ : ಒಂದಕ್ಕಿಂತ ಹೆಚ್ಚು ಪ್ರಕೃತಿಗಳು ಸೇರಿ ಸಮಾಸಗಳು ಸೃಷ್ಟಿಯಾಗುತ್ತವೆ. ಎರಡು ಪ್ರಕೃತಿಗಳಿದ್ದಾಗ ಮೊದಲನೆಯದು ಪೂರ್ವಪದ, ಎರಡನೆಯದು ಉತ್ತರಪದ. ಕನ್ನಡ ಸಬ್ದಗಳಾಗಿದ್ದರೆ ಕನ್ನಡ ಸಮಾಸ, ಸಂಸ್ಕೃತ ಶಬ್ದಗಳಾಗಿದ್ದರೆ ಸಂಸ್ಕೃತ ಸಮಾಸ. ತೆಂಗಾಳಿ, ಇಮ್ಮಾವು, ಈರಯ್ದು,

ಮುಂಗಯ್, ಕುಮುಪಿಲ್ಲಿ ಮುಂತಾದ ಸಮಾಸ ಪದಗಳಲ್ಲಿರುವ ಆಖ್ಯಾತ ಪ್ರತ್ಯಯಗಳನ್ನು (ಇದ್ದರೆ) ತೆಗೆದುಹಾಕಿ ಸಮಾಸಲಿಂಗಗಳನ್ನು ಮಾಡಿಕೊಳ್ಳಬೇಕು. ತೆಂಗಾಳಿ ಎಂಬುದು ಅಕಾರಾಂತ ಶಬ್ದವಲ್ಲವಾದುದರಿಂದ ಅದು ತಾನಿದ್ದ ರೂಪದಲ್ಲಿಯೇ ಸಮಾಸಲಿಂಗವಾಗುತ್ತದೆ. ಸಮಾಸ ಲಿಂಗಗಳಿಗೆ ಸಪ್ತವಿಭಕ್ತಿ ಪ್ರತ್ಯಯಗಳನ್ನು ಹಚ್ಚಬಹುದು.

ನಾಮಲಿಂಗ : ನಾಮಲಿಂಗವು ಪ್ರಕೃತಿಯೇ ಆಗಿರುತ್ತದೆ. ಪ್ರಕೃತಿಯ ಮೇಲೆ ಯಾವುದೇ ಪ್ರತ್ಯಯವಾಗಲಿ, ಪ್ರಕೃತಿಗಳಾಗಲಿ ಸೇರಿರುವುದಿಲ್ಲ. ಇವು ಅವಿಭಾಜ್ಯ ರೂಪಗಳು. ಸಾಮಾನ್ಯವಾಗಿ ನಾಮ ಲಿಂಗಗಳು ಸಹಜ ಪ್ರಕೃತಿಗಳು. ಇದುವರೆಗೆ ನೋಡಿದ ಕೃಲ್ಲಿಂಗ, ತದ್ಧಿತಲಿಂಗ, ಸಮಾಸಲಿಂಗ ಇವು ನಿಷ್ಪನ್ನ ಅಥವಾ ಸಾಧಿತ ಪ್ರಕೃತಿರೂಪಗಳು. ನಾಮಲಿಂಗಗಳಲ್ಲಿ ಮೂರು ವಿಧ.




ರೂಢನಾಮಗಳು ಅಸಂಖ್ಯಾತವಾಗಿವೆ. ಯಾವ ಭಾಷೆಯಲ್ಲಿಯಾದರೂ ಇವುಗಳೇ ಅತ್ಯಧಿಕ. ಇದರಲ್ಲಿ ದೇಶ್ಯಶಬ್ದಗಳೂ ಇವೆ ಅನ್ಯದೇಶ್ಯಗಳೂ ಇವೆ. ಉದಾಹರಣೆಗೆ ಅರಸ, ಇಂದ್ರ, ವರಾಹ, ಹರಿಣ ಇತ್ಯಾದಿ. ಇವುಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಬಹುದು. ಅರಸಂ, ಅರಸನಂ, ಅರಸನಿಂ, ಅರಸಂಗೆ, ಅರಸನತ್ತಣಿಂ, ಅರಸನ, ಅರಸನೊಳ್. ಅಂಕಿತನಾಮಗಳೆಂದರೆ ನಾವು ಕೊಟ್ಟ ಹೆಸರುಗಳು. ಯಾರನ್ನಾದರೂ ಯಾವುದನ್ನಾದರೂ ಗುರುತಿಸಲು ಅವು ಅಗತ್ಯವಾಗಿವೆ. ಬಸವ, ರಾಮ, ಜಾನ್, ಷರೀಫ್ ಇತ್ಯಾದಿ. ಇವುಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ. ಇನ್ನು ಅನ್ವರ್ಥನಾಮವೆಂದರೆ ಸ್ವಭಾವಕ್ಕೆ ಸ್ವರೂಪಕ್ಕೆ ತಕ್ಕಂತೆ ಇರುವಂತಹ (ನಾವು ಕೊಟ್ಟ) ಶಬ್ದಗಳು, ಕುಂಟ, ಕುರುಡ, ಅಭಿಮಾನಿ, ನೀತಿಜ್ಞ, ದಾನಿ ಮುಂತಾದುವು. ಇವುಗಳಿಗೂ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ.

ಕೇಶಿರಾಜನು ಈ ಸಂದರ್ಭದಲ್ಲಿ ಒಂದು ವಿಶೇಷ ವಿಷಯವನ್ನು ತಿಳಿಸುತ್ತಾನೆ. ಕನ್ನಡದಲ್ಲಿ ನಾಮಪ್ರಕೃತಿಗಳು ಒಂದು ಅಕ್ಷರದ ಶಬ್ದದಿಂದ ಹಿಡಿದು ಐದು ಅಕ್ಷರದ ಶಬ್ದದವರೆಗೆ ಇದೆ ಎಂದು ಕೇಶಿರಾಜನು ಹೇಳುತ್ತಾನೆ. ಅವುಗಳಾವುವೆಂದರೆ ಪೂ, ಮರ, ಪೊತ್ತಗೆ, ಕವಳಿಗೆ, ಕಟ್ಟವತ್ತಿಗೆ ಎಂಬುವು.

ಸಂಸ್ಕೃತದ ಭಾವವಾಚಕಗಳಿಗೆ ಇಸು ಪ್ರತ್ಯಯವನ್ನು ಸೇರಿಸಿದರೆ ಕೃಲ್ಲಿಂಗವಾಗುವುದೆಂದು ಕೇಶಿರಾಜನು ಹೇಳುತ್ತಾನೆ. ಉದಾಹರಣೆಗೆ ಭಾವಿಸು ಎಂಬುದಕ್ಕೆ ಭಾವಿಸಿದಂ, ಭಾವಿಸಿದನಂ, ಭಾವಿಸಿದನಿಂ....... ಇತ್ಯಾದಿ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಬಹುದೆಂದು 84ನೇ ಸೂತ್ರದಲ್ಲಿ ಹೇಳಿದ್ದಾನೆ. ನಾಮ ಪ್ರಕೃತಿಯ ವ್ಯಾಪ್ತಿಗಿಂದ ಲಿಂಗದ ವ್ಯಾಪ್ತಿಯು ತುಂಬಾ ದೊಡ್ಡದು. ಸಮುಪಾತ್ತಕ್ರಿಯೆ ಮತ್ತು ವಾಕ್ಯಮಾಲೆ ಗಳೂ ಕೂಡ ಲಿಂಗವಾಗಬಲ್ಲವು ಎಂದು ಹೇಳಲಾಗಿದೆ. ಬಿರುದಾವಳಿಯೂ ಲಿಂಗವಾಗುತ್ತದೆ. 'ಸಮುಪಾತ್ತಕ್ರಿಯೆಗೆ ನಪ್ರೋಸ್ತುಗಳ್' ಎಂಬುದು ಜೈನ ಸನ್ಯಾಸಿಗಳಿಗೆ ಇನ್ನೊಂದು ಹೆಸರು. ನಪ್ರೋಸ್ತುಗಳ್ ನಪ್ರೋಸ್ತುಗಳಂ, ನಪ್ರೋಸ್ತುಗಳಿಂ....... ಹೀಗೆ ವಿಭಕ್ತಿಗಳನ್ನು ಹಚ್ಚಬಹುದು.

ವಾಕ್ಯಮಾಲೆಗಳಾದ ಗುಣಕ್ಕೆ ಸಲ್ಲ ಗಣೇಶಂ ಸೋರ್ಕಾನೆಗಳ್ಗಾಲಾನಂ...... ಮುಂತಾದವು ವಿಭಕ್ತಿ ಪ್ರತ್ಯಯಗಳನ್ನು ತೆಗೆದುಕೊಳ್ಳಬಲ್ಲುವು.

ಸಂಸ್ಕೃತ ಶಬ್ದಕೋಶದಲ್ಲಿರುವ ಸಂಖ್ಯಾವಾಚಕ ಮತ್ತು ಅವ್ಯಯಗಳನ್ನು ಹೊರತುಪಡಿಸಿ ಕನ್ನಡಕ್ಕೆ ಒಗ್ಗುವ ಸಂಸ್ಕೃತ ನಾಮಪ್ರಕೃತಿಗಳನ್ನು ಅಲ್ಪ ವ್ಯತ್ಯಾಸ ಮಾಡಿಕೊಂಡು ಸಮಸಂಸ್ಕೃತ ಎಂಬ ಹೆಸರಿಟ್ಟು ಕನ್ನಡ ಲಿಂಗ ಗಳನ್ನಾಗಿ ಮಾಡಿಕೊಳ್ಳಬಹುದೆಂದು 90 ನೇ ಸೂತ್ರ ಹೇಳುತ್ತದೆ.

> ಸಮುದಿತ ಸಂಖ್ಯಾವ್ಯಯ ರಹಿ [illegible]
> ತಮೆನಿಸಿ ವರ್ತಿಪ ನಿಘಂಟುವಿನ ನಾಮ ಪದೋ[illegible]
> ತ್ತಮ ವರ್ಣ ಪ್ರಕೃತಿಗಳಂ
> ಸಮಸಂಸ್ಕೃತವೆಸರನಿಟ್ಟು ಲಿಂಗಂ ಮೊಟ್ಟಿರ್

ಇಲ್ಲಿ ಗಮನಿಸಬೇಕಾದ ಒಂದು ಮುಖ್ಯವಾದ ಅಂಶವೆಂದರೆ ಕೇಶಿರಾಜನ ಪರಿಭಾಷೆಯಲ್ಲಿ ಸಮಸಂಸ್ಕೃತ ಎಂದರೆ ನಾಮ ಹೇಳುವ ತತ್ಸಮ ಶಬ್ದಗಳು. ಅವನ ದೃಷ್ಟಿಯಲ್ಲಿ ತತ್ಸಮ ಎಂದರೆ ಕನ್ನಡ ಮತ್ತು ಸಂಸ್ಕೃತ ಎರಡೂ ಕಡೆ ಒಂದೇ ರೂಪದಲ್ಲಿರುವ ಶಬ್ದಗಳು. ತದ್ಭವಗಳನ್ನು ಅವನು ಅಪಭ್ರಂಶಗಳೆಂದು ಕರೆಯುತ್ತಾನೆ. ಇನ್ನೊಂದು ಅಂಶವೆಂದರೆ ಸಮಸಂಸ್ಕೃತದ ಜೊತೆಗೆ ಕನ್ನಡ ಶಬ್ದಗಳನ್ನು ಬೆರಸಿ ಸಮಾಸ ಮಾಡಬಾರದು ಎನ್ನುತ್ತಾನೆ. ಅದೇ ಅರಿಸಮಾಸದ ವಿಚಾರವಾಗಿದೆ. ಉದಾಹರಣೆಗೆ ಅರಸುಕುಮಾರ, ಕಳದಿಸಮೇತ, ಮುಖತಾಮರೆ ಇತ್ಯಾದಿಗಳು ದೋಷಪೂರ್ಣವಾಗಿವೆ ಎಂಬುದು ಆತನ ಅಭಿಮತವಾಗಿದೆ. ಸಾಂಪ್ರದಾಯಿಕ ತತ್ಸಮ ಅಂದರೆ ಸಮಸಂಸ್ಕೃತಗಳು ಹಲವು ವಿಧಾನಗಳಲ್ಲಿ ಕನ್ನಡಕ್ಕೆ ಬರುತ್ತವೆ. ಆಕಾರಾಂತಗಳು ಎಕಾರಾಂತಗಳಾಗುತ್ತವೆ: ಮಾಲಾ > ಮಾಲೆ, ಬಾಲಾ >ಬಾಲೆ, ಶಾಲಾ >ಶಾಲೆ, ನಿದ್ರಾ >ನಿದ್ರೆ, ಭಾಷಾ >ಭಾಷೆ ಇತ್ಯಾದಿ. ಈ ಕಾರಾಂತಗಳು ಇ ಕಾರಾಂತಗಳಾಗುವುದು: ಲಕ್ಷ್ಮೀ >ಲಕ್ಷ್ಮಿ, ಗೌರೀ > ಗೌರಿ, ಸರಸ್ವತೀ > ಸರಸ್ವತಿ, ಶಚೀ > ಶಚಿ, ಯಾಮಿನೀ > ಯಾಮಿನಿ ಇತ್ಯಾದಿ. ಊಕಾರಾಂತಗಳು ಉಕಾರಾಂತಗಳಾಗುವುದು : ಸರಯೂ > ಸರಯು, ಖರ್ಜೂ> ಖರ್ಜು, ಜಂಬೂ; >ಜಂಬು, ಚಮೂ > ಚಮು.

ಅ,ಇ.ಉ.ಋ ಕಾರಾಂತಗಳಾದ ಸಂಸ್ಕೃತ ಶಬ್ದಗಳು ಯಥಾಸ್ಥಿತಿಯಲ್ಲಿಯೇ ಕನ್ನಡಕ್ಕೆ ಬಂದು ಲಿಂಗಗಳಾಗಿರುತ್ತವೆ. ಉದಾಹರಣೆಗೆ ಭುವನ, ನಳಿನ, ಕಳಶ, ಶ್ರುತಿ, ಧೃತಿ, ರತಿ, ಪತಿ, ಯತಿ, ಪಶು, ಶಿಶು, ಧೇನು, ಸೇತು, ಪಿತೃ, ನೇತೃ, ಮಾತೃ, ದಾತೃ ಇತ್ಯಾದಿ.

ಕೆಲವು ಕಡೆ ಋಕಾರಕ್ಕೆ ಆರ ಬರುತ್ತದೆ. ಕರ್ತೃ>ಕರ್ತಾರ, ಹೋತೃ>ಹೋತಾರ, ದಾತೃ>ದಾತಾರ: ವಿಶೇಷವಾಗಿ ವಿಧಾತೃ>ವಿಧಾತ್ರ, ದಾತೃ>ದಾತ : ಪಿತೃ>ಪಿತರ ಎಂಬ ರೂಪಗಳನ್ನು ತಾಳುತ್ತವೆ. 'ಪಿತರ' ಎಂಬ ಶಬ್ದರೂಪವು ಸ್ವರ್ಗಸ್ಥರಾದ ಪಿತೃಗಳಿಗೆ ಅನ್ವಯಿಸುತ್ತದೆಂದು ತಿಳಿಸಲಾಗಿದೆ.

ಇದುವರೆಗೆ ಸ್ವರಾಂತ ಸಮಸಂಸ್ಕೃತಗಳನ್ನು ತಿಳಿಸಿದ ನಂತರ ವ್ಯಂಜನಾಂತಗಳನ್ನು ತಿಳಿಸುತ್ತಾನೆ.

1. ದಿವ್>ದಿವ, ಮರುತ್>ಮರುತ, ಸಂಪದ್>ಸಂಪದ.......
2. ಅಪ್>ಅಪ್ಪು, ವಾಕ್>ವಾಕ್ಕು, ವಿದ್ಯುತ್>ವಿದ್ಯುತ್ತು.......
3. ರಾಜನ್>ರಾಜ, ಬ್ರಹ್ಮನ್>ಬ್ರಹ್ಮ, ಆತ್ಮನ್>ಆತ್ಮ.......
4. ಯಶಸ್>ಯಶಂ / ಯಶಸ್ಸು, ತೇಜಸ್>ತೇಜಂ / ತೇಜಸ್ಸು .......

ಕೆಲವು ಸಂಸ್ಕೃತ ಬಹುವಚನ ರೂಪಗಳು ವಿಸರ್ಗವನ್ನು ಕಳೆದುಕೊಂಡು ಕನ್ನಡದ ಏಕವಚನ ಲಿಂಗಗಳಾಗುತ್ತವೆ.
ವಿದ್ವಾಂಸಃ >ವಿದ್ವಾಂಸ, ಶ್ರೀಮಂತಃ > ಶ್ರೀಮಂತ, ಹನುಮಂತಃ > ಹನುಮಂತ

ಅವ್ಯಯಗಳನ್ನು ಸಮಾಸ ರೂಪದಲ್ಲಿ ಪಡೆದು "ಲಿಂಗ" ಮಾಡಿಕೊಳ್ಳಬಹುದು ಎಂದು ಕೇಶಿರಾಜನು ಶ್ರುತಪಡಿಸಿದ್ದಾನೆ. ಸಂಸ್ಕೃತದಲ್ಲಿ ತ್ಯದಾದಿ ಮತ್ತು ಶತೃಙಂತ ಎಂಬುವುಗಳಿವೆ. ಇವುಗಳನ್ನೂ ಕೂಡ ಸಮಾಸ ರೂಪಕ್ಕೆ ತಂದುಕೊಂಡ ನಂತಹ ಲಿಂಗವನ್ನಾಗಿ ತೆಗೆದುಕೊಂಡು ಪ್ರತ್ಯಯಗಳನ್ನು ಹಚ್ಚಬಹುದು.

ಉದಾಹರಣೆ ಅವ್ಯಯ: ಅಂತರ್+ಮುಖ=ಅಂತರ್ಮುಖ, ಬಹಿರ್ಮುಖ, ಇತ್ಯಾದಿ
ತ್ಯದಾದಿಗಳು: ತ್ಯದ್+ಕಥನ=ತ್ಯದ್ಕಥನ, ತದ್ವಚನ, ಕಿಂವಾರ್ತಾ, ಭವದ್ರಾಜ್ಯ, ಯುಷ್ಮದ್ಗುಣ ಇತ್ಯಾದಿ.
ಶತೃಙಂತಗಳು: ರಝಣತ್+ಕಂಕಣ=ರಝಣತ್ಕಂಕಣ, ರಟತ್ಕೋಕಿಲ, ಚಂಚದ್ರೂಪ, ಚಲತ್ಕುಂತಲ, ಲಸದ್ವಚನ ಇತ್ಯಾದಿ.

ಮೇಲೆ ಹೇಳಿರುವ ಅಂತರ್ಮುಖ ಮೊದಲಾದ ಅವ್ಯಯ ಸಮಾಸಗಳಿಗೆ ತ್ಯದಾದಿ ಸಮಾಸಗಳಿಗೆ ಮತ್ತು ಶತೃಙಂತ ಸಮಾಸಗಳಿಗೆ ಸುಪ್ತವಿಭಕ್ತಿಗಳನ್ನು ಹಚ್ಚಬಹುದು.
ಕೇಶಿರಾಜನು ಈ ಸಂದರ್ಭದಲ್ಲಿ ತದ್ಭವಗಳ ವಿಚಾರವನ್ನು ಪ್ರಸ್ತಾಪಿಸಿಲ್ಲ. ಅದನ್ನು ಪ್ರತ್ಯೇಕವಾಗಿ ವಿವರಿಸಿದ್ದಾನೆ.

ಕೇಶಿರಾಜನ ಪ್ರಕಾರ ತತ್ಸಮ ಎಂದರೆ ಸಂಸ್ಕೃತಕ್ಕೂ ಕನ್ನಡಕ್ಕೂ ಸಮಾನವಾದ ಶಬ್ದಗಳು: ಮಣಿ, ಮಂಚ, ಪಟ್ಟ ಇತ್ಯಾದಿ.

ಉದಾ: ಮಕುಟಮಣಿ, ದಿನಮಣಿ, ಉಡೆಮಣಿ. [ಮಣಿ]
ಕಾಂಚನಮಂಚಂ, ರತ್ನಮಂಚಂ, ಸೆಳೆಮಂಚಂ [ಮಂಚಂ]
ಪಟ್ಟಮಹಿಷಿ, ಪಟ್ಟಸರಂ, ಪಟ್ಟವಣೆ, ಪಟ್ಟಗದ್ದಿಗೆ [ಪಟ್ಟ]
ಕಾಂಸ್ಯತೋರಣಂ, ಮಕರತೋರಣಂ, ತಳಿರ್ದೋರಣಂ [ತೋರಣಂ]

## 2.6. ಲಿಂಗ, ವಚನ, ವಿಭಕ್ತಿ

ನಾಮಪ್ರಕೃತಿಗಳ ಜೊತೆಗೇ ಬರುವ ಮಿತ್ರರು ಈ ಲಿಂಗ, ವಚನ ಮತ್ತು ವಿಭಕ್ತಿಗಳು. ಲಿಂಗ ಎಂದರೆ ಇದುವರೆಗೆ ನೋಡಿದಿರಲ್ಲ ಅದಲ್ಲ. ಅದು ನಾಮ ಪ್ರಕೃತಿಗೆ ಕೇಶಿರಾಜನು ಕೊಟ್ಟ ವಿಶಿಷ್ಟ

ಹೆಸರು. ಅದಕ್ಕೂ ಇಲ್ಲಿ ಬರುವ ಲಿಂಗ ಶಬ್ದಕ್ಕೂ ಸಂಬಂಧ ಕಲ್ಪಿಸಬೇಡಿ.

## 2.6.0. ಲಿಂಗಗಳು

ಕೇಶಿರಾಜನ ಕಣ್ಣಮುಂದೆ ಮಾರ್ಗದರ್ಶಕ ಸಂಸ್ಕೃತ ವ್ಯಾಕರಣವೆ ಇದ್ದುದರಿಂದ ಬಹುಬೇಗ ಅಲ್ಲಿರುವುದನ್ನೇ ಕನ್ನಡಕ್ಕೆ ಅನ್ವಯಿಸಿ ಹೇಳಿಬಿಟ್ಟು, ಸ್ವಲ್ಪ ತಡೆದು ಯೋಚಿಸಿ ಬೇರೆ ರೀತಿಯಲ್ಲಿ ಹೇಳಲು ಪ್ರಾರಂಭಿಸುತ್ತಾನೆ. ಸಂಸ್ಕೃತದಿಂದ ಕನ್ನಡ ಹುಟ್ಟಿತು ಎಂದು ದೃಢವಾಗಿ ನಂಬಿದ್ದ ಕಾಲ ಅದು.

ನೀನಱಿ ಕರ್ಣಾಟಕದೊಳ್
ಪೇನಂ ಸ್ತ್ರೀಪ್ ನಪುಂಸಕೋಭಯ ಪುಂಸ್ತ್ರೀ
ಸ್ತ್ರೀನಪ್ ಸಮಸ್ತ ವಾಚ್ಯಾ
ನೂನಾವ್ಯಯಮೆಂದು ಲಿಂಗವೊಂಬತ್ತು ತೆಱಂ

ಕರ್ಣಾಟಕದೊಳ್ ಎಂದರೆ ಕನ್ನಡದಲ್ಲಿ ಲಿಂಗಂ ಒಂಬತ್ತು ತೆಱಂ ಎಂದು ಹೇಳಿರುವುದನ್ನು ನೋಡಿ. ನಿಮಗೆ ಗೊತ್ತಿರುವುದು ಮೂರು ತೆರದ ಲಿಂಗಗಳು ಅಲ್ಲವೆ. ಇಲ್ಲಿ ಬಂದುವು ಒಂಬತ್ತು ತೆರ ಎಂದು ಗಾಬರಿಯಾಗಬೇಕಾಗಿಲ್ಲ. ಆತ ಹೇಳುವುದು ಸಂಸ್ಕೃತದಲ್ಲಿರುವ ಲಿಂಗಗಳು ಅವುಗಳೆಂದರೆ ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗ, ಪುಂಸ್ತ್ರೀಲಿಂಗ, ಸ್ತ್ರೀನಪುಂಸಕಲಿಂಗ, ಪುನ್ನಪುಂಸಕಲಿಂಗ, ತ್ರಿವಿಧಲಿಂಗ, ವಿಶೇಷ್ಯಾಧೀನ ಲಿಂಗ, ಅವ್ಯಯಲಿಂಗ.

ಮುಖ್ಯವಾದ ಒಂದು ಅಂಶವೆಂದರೆ ಸಂಸ್ಕೃತದಲ್ಲಿ ಲಿಂಗ ವಿವಕ್ಷೆ ಶಬ್ದಾನುಸಾರಿಯಾದುದು, ಕನ್ನಡದಲ್ಲಿ ಅದು ಅರ್ಥಾನುಸಾರಿಯಾದುದು. ಅಂದರೆ ಸಂಸ್ಕೃತದಲ್ಲಿ ಒಂದು ಶಬ್ದ ಯಾವ ಲಿಂಗಕ್ಕೆ ಸೇರುತ್ತದೆ ಎನ್ನುವುದನ್ನು ವ್ಯಾಕರಣ ತಿಳಿಸುತ್ತದೆ. ಉದಾಹರಣೆಗೆ ಹೆಂಡತಿ ಎನ್ನುವುದಕ್ಕೆ ಸಂಸ್ಕೃತದಲ್ಲಿರುವ ಮೂರು ಶಬ್ದಗಳು ಮೂರು ಬೇರೆ ಬೇರೆ ಲಿಂಗಕ್ಕೆ ಸೇರುತ್ತವೆ. ಪತ್ನೀ ಎಂಬುದು ಸ್ತ್ರೀಲಿಂಗ, ದಾರಾ ಎಂಬುದು ಪುಲ್ಲಿಂಗ, ಕಳತ್ರ ಎಂಬುದು ನಪುಂಸಕಲಿಂಗ. ಆದ್ದರಿಂದ ಹೆಂಡತಿ ಎಂಬ ಅರ್ಥಕೊಡುವ ಮೂರು ಶಬ್ದಗಳೂ ಬೇರೆ ಬೇರೆ ಲಿಂಗಕ್ಕೆ ಸೇರುತ್ತವೆ. ಆದರೆ ದ್ರಾವಿಡ ಭಾಷೆಗಳಲ್ಲಿ ಲಿಂಗ ವಿವಕ್ಷೆ ಇದಕ್ಕೆ ತೀರಾ ಭಿನ್ನವಾಗಿದೆ. ಬುದ್ಧಿಯುಳ್ಳ ಮೇಲ್ವರ್ಗದ ಜೀವಿಗಳನ್ನು ಒಂದು ಗುಂಪನ್ನಾಗಿಯೂ ಬುದ್ಧಿ ಪ್ರಧಾನವಲ್ಲದವುಗಳನ್ನು ಇನ್ನೊಂದು ಗುಂಪನ್ನಾಗಿಯೂ ಮಾಡಲಾಗಿದೆ. ಬುದ್ಧಿ ಪ್ರಧಾನ ಜೀವಿಗಳು ಎಂದರೆ ವಯಸ್ಕ ಗಂಡಸರು ಹೆಂಗಸರು. ಅವರಲ್ಲಿ ಪುಲ್ಲಿಂಗ, ಸ್ತ್ರೀಲಿಂಗಗಳ ವಿವಕ್ಷೆ ಇದೆ. ಬುದ್ಧಿ ಪ್ರಧಾನವಲ್ಲದ ಪ್ರಾಣಿವರ್ಗ, ಮಕ್ಕಳು ಇವುಗಳನ್ನು ಜಡವಸ್ತುಗಳ ಜೊತೆಗೆ ಸೇರಿಸಿ ನಪುಂಸಕಲಿಂಗ ಎನ್ನಲಾಗಿದೆ. ಈ ವಿಚಾರವನ್ನು ತಿಳಿದ ಕೇಶಿರಾಜನು 101 ನೇ ಸೂತ್ರದಲ್ಲಿ ಒಂದು ತಿದ್ದುಪಡಿ ತಂದಿದ್ದಾನೆ.

ಪುರುಷರೆ ಪುಲ್ಲಿಂಗಂ ಸ್ತ್ರೀ
ಯರೆ ಸ್ತ್ರೀಲಿಂಗಮುೞಿದುವೆಲ್ಲಂ ನಪ್ಪಾ
ಗಿರೆ ಸಲ್ಗುಂ ಕನ್ನಡದೊಳ್
ಪರಿವರ್ತಿಸಪುೞಿದ ಲಿಂಗಮೊಳವಾಗಿರ್ದುಂ

ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪ್ಲಿಂಗ ಇವುಗಳೇ ಮುಖ್ಯವೆಂದು ಹೇಳುವಷ್ಟು ಎಚ್ಚರವಹಿಸಿದ್ದಾನೆ. ಆದರೂ ಉಳಿದ ಆರು ಲಿಂಗಗಳು ಇದ್ದರೂ ಕ್ರಿಯಾಶೀಲವಾಗಿಲ್ಲ ಎಂದು ಹೇಳುತ್ತಾನೆಯೇ ಹೊರತು ಅವುಗಳು ಇಲ್ಲ ಎಂದು ಹೇಳಿಲ್ಲ. ತಮಿಳಿನಲ್ಲಿ ಬುದ್ಧಿ ಪ್ರಧಾನವಾದವುಗಳನ್ನು ಉಯರ್ ತಿಣ್ಯೆ ಎಂದೂ, ಬುದ್ಧಿ ಪ್ರಧಾನವಲ್ಲದವುಗಳನ್ನು ಅಙ್ಱಿಣ್ಯೆ ಎಂದೂ ಮತ್ತು ತೆಲುಗಿನಲ್ಲಿ ಕ್ರಮವಾಗಿ ಮಹತ್ ಮತ್ತು ಅಮಹತ್ ಎಂದೂ ಹೇಳಲಾಗುತ್ತದೆ. ಕನ್ನಡವು ಇಂತಹ ವರ್ಗೀಕರಣವನ್ನು ಹೇಳುವುದಿಲ್ಲ. ಬಹುಶಃ ಸಂಸ್ಕೃತದ ಅನುಸರಣೆ ಇದಕ್ಕೆ ಕಾರಣವಾಗಿರಬಹುದು.

## 2.6.1. ವಚನಗಳು

ಕೇಶಿರಾಜನು ಮಾಮೂಲಿನಂತೆ ಇಲ್ಲಿಯೂ ಏಕವಚನ, ದ್ವಿವಚನ, ಬಹುವಚನ ಎಂದು ಮೂರು ವಚನಗಳನ್ನು ಕುರಿತು ಹೇಳುತ್ತಾನೆ. ಏಕವನ್ನು, ಅನೇಕವನ್ನು ಮಾತ್ರ ಹೇಳದೆ ದ್ವಿ (ಎರಡು) ವಚನವನ್ನು ಹೇಳಿರುವುದಕ್ಕೆ ಸಂಸ್ಕೃತದ ಅನುಸರಣೆಯೇ ಕಾರಣವಾಗಿದೆ. ಎರಡು ವಸ್ತು ವ್ಯಕ್ತಿಗಳನ್ನು ಹೇಳಲು ದ್ವಿವಚನ ಬೇಕು ಎಂದಿದ್ದಾನೆ. ಭೀಮಾರ್ಜುನರ್, ರಾಮಲಕ್ಷ್ಮಣರ್, ಕಣ್ಣುಗಳ್ ಇತ್ಯಾದಿ. ಆದರೆ ಕನ್ನಡದಲ್ಲಿ ಇವುಗಳನ್ನು ಬಹುವಚನಕ್ಕೆ ಸೇರಿಸುತ್ತಾರೆ. ದ್ವಿವಚನಕ್ಕೆ ಗಳ್ ಎಂಬ ಪ್ರತ್ಯಯವನ್ನೂ, ಬಹುವಚನಕ್ಕೆ 'ಅವು' ಎಂಬ ಪ್ರತ್ಯಯವನ್ನೂ ಬಳಸುವುದಾಗಿಯೂ, ಇವುಗಳು ವಿಭಕ್ತಿಗಿಂತ ಮೊದಲೇ ಸೇರುವುವೆಂದೂ ಹೇಳಿದ್ದಾನೆ. ವಿಭಕ್ತಿ ಪ್ರತ್ಯಯಗಳು ಎಕವಚನದಲ್ಲಿ ಪ್ರಕೃತಿ ಯ ಮೇಲೆಯೂ ಬಹುವಚನದಲ್ಲಿ ಬಹುವಚನ ಪ್ರತ್ಯಯ ಸೇರಿದ ನಂತರ ವಿಭಕ್ತಿ ಸೇರುತ್ತದೆ. 'ಅವು' ಎಂಬುದು ಸರ್ವನಾಮ ಮತ್ತು ಗುಣವಚನಕ್ಕೆ ಸೇರುತ್ತದೆ ಎಂದು ಹೇಳಲಾಗಿದೆ.

ಸರ್ವನಾಮ: ಅದು - ಅವು; ಇದು - ಇವು; ಆವುದು - ಆವುವು
ಗುಣವಚನ: ಇನಿದು - ಇನಿಯವು; ಮೆಲ್ಲಿತು - ಮೆಲ್ಲಿದುವು.
ಕನ್ನಡ ಕೈಪಿಡಿಯಲ್ಲಿ 'ಸರ್ವನಾಮ, ಗುಣವಚನಗಳಿಗೆ ಬಹುವಚನದಲ್ಲಿ 'ವು' 'ಅವು' ಎಂಬ ಪ್ರತ್ಯಯಗಳು ಸೇರುತ್ತವೆ' ಎಂದು ಹೇಳಿದ್ದಾರೆ.

ಸರ್ವನಾಮ, ಗುಣವಚನಗಳ ಮುಂದೆ 'ಅವು' ಎಂಬ ಬಹುವಚನದ ಪ್ರತ್ಯಯ ಸೇರುವಾಗ ಏಕವಚನ ಸರ್ವನಾಮದ ಕೊನೆಯ ಅಕ್ಷರ ಮತ್ತು 'ಅವು' ನಲ್ಲಿರುವ ಅ ಕಾರ ಲೋಪವಾಗುತ್ತವೆ.

ಪೆಱತು+ಅವು=ಪೆಱವು; ಎಲ್ಲದು+ಅವು= ಎಲ್ಲವು, ಕರಿದು+ಅವು= ಕರಿಯವು, ಬಿಳಿದು+ಅವು= ಬಿಳಿಯವು, ಅಸಿದು+ಅವು= ಅಸಿಯವು, ಇಂತಹ ಕಡೆ 'ವು' ಎಂಬುದೇ ಬಹುವಚನ ಪ್ರತ್ಯಯವೆಂದು ಹೇಳಬಹುದಾಗಿತ್ತು. ಅಷ್ಟೇ ಅಲ್ಲದೆ ಪೆಱ, ಎಲ್ಲ, ಕರಿ, ಬಿಳಿ, ಅಸಿ ಎಂಬ ಶಬ್ದರೂಪಗಳೇ ಪ್ರಕೃತಿ ರೂಪಗಳೆಂದು ಒಪ್ಪಿಕೊಂಡರೆ ಏಕವಚನದಲ್ಲಿ ಸರ್ವನಾಮ ಗುಣವಚನಗಳ ಅಂತ್ಯಾಕ್ಷರದ ಲೋಪ ವಿಚಾರವನ್ನು ಹೇಳಬೇಕಾಗುವುದಿಲ್ಲ.

'ಅರ್' ಎಂಬ ಬಹುವಚನ ಪ್ರತ್ಯಯದ ಬಗ್ಗೆ ಹೇಳುತ್ತಾ ಸಂಖ್ಯಾವಾಚಕ ಸರ್ವನಾಮ, ಕೃದಂತ, ತದ್ಧಿತಾಂತ ಮತ್ತು ಗುಣವಚನಗಳನ್ನು ಅವಲಂಬಿಸಿದ ಪುಲ್ಲಿಂಗ ಸ್ತ್ರೀಲಿಂಗ ಬಹುವಚನ

ರೂಪವಾಗಲು. 'ಅರ್' ಸೇರುತ್ತದೆ ಎನ್ನಲಾಗಿದೆ.

ಪುಲ್ಲಿಂಗ: ಸಾಮಂತ+ಅರ್= ಸಾಮಂತರ್, ಕೋವಿದ+ಅರ್= ಕೋವಿದರ್

ಸ್ತ್ರೀಲಿಂಗ: ದೇವಿ+ಅರ್= ದೇವಿಯರ್, ಕಾಂತೆ+ಅರ್= ಕಾಂತೆಯರ್

ಸಂಖ್ಯಾವಾಚಕ: ಇರ್+ಅರ್= ಇರ್ವರ್, ಸಾಸಿರ+ಅರ್= ಸಾಸಿರ್ವರ್

ಸರ್ವನಾಮ: ಪೆಱತು+ಅರ್= ಪೆಱರ್, ಅವನ್+ಅರ್= ಅವರ್

ಕೃದಂತ: ಮಾಡಿದ+ಅರ್= ಮಾಡಿದರ್, ಬೇಡಿದ+ಅರ್=ಬೇಡಿದರ್

ತದ್ಧಿತಾಂತ: ಮಣಿಗಾರ+ಅರ್= ಮಣಿಗಾರರ್, ಕಂಚುಗಾರ+ಅರ್= ಕಂಚಗಾರರ್

ಗುಣವಚನ: ಒಳ್ಳಿತು+ಅರ್= ಒಳ್ಳಿದರ್, ಬಲ್ಲಿತು+ ಅರ್= ಬಲ್ಲಿದರ್

ಅರ್ ಎಂಬ ಬಹುವಚನದ ವ್ಯಾಪ್ತಿ ಬಹಳ ದೊಡ್ಡದು. ಪ್ರಮಾಣವಾಚಕ ಸಂಖ್ಯಾವಾಚಕಗಳು ಪುಲ್ಲಿಂಗ ಸ್ತ್ರೀಲಿಂಗ ವಾಚಿಗಳಾಗಿದ್ದರೆ ಅರ್ ಸೇರುವಾಗ 'ವ' ಕಾರಾಗಮವಾಗುತ್ತದೆ. ಕೆಲವು ಸಲ ವ ಕಾರಕ್ಕೆ ಬದಲು ಬ ಕಾರಾಗಮವಾಗುತ್ತದೆ. ಬಿಂದು ಐಚ್ಛಿಕವಾಗಿರಬಹುದು. 'ಬ' ಕಾರವು ಲೋಕವಾಗಲೂ ಬಹುದು.

ಉದಾ: ಮೂ+ವ+ಅರ್ =ಮೂವರ್; ಎಲ್ಲ+ವ+ಅರ್= ಎಲ್ಲವರ್

ಅನಿ+ಬ+ಅರ್= ಅನಿಬರ್; ಇರ್+ಬ+ಅರ್= ಇರ್ಬರ್

ಪಲ+ಂ+ಬ+ಅರ್= ಪಲಂಬರ್; ಕೆಲ+ಂ+ಬ+ಅರ್=ಕೆಲಂಬರ್

ಕೆಲ+ಅರ್=ಕೆಲರ್, ಎಲ್ಲ+ಅರ್=ಎಲ್ಲರ್

ಕೇಶಿರಾಜನು ಕಳ್/ಗಳ್ ಪ್ರತ್ಯಯಗಳ ಬಗ್ಗೆ ಹೇಳುತ್ತಾ ಅವುಗಳಿಗೆ ವಿಶೇಷವಾದ ವ್ಯಾಪ್ತಿಯುಂಟು ಎನ್ನುತ್ತಾರೆ. ಅರ್, ವಿರ್ ಎಂಬ ಬಹುವಚನ ಪ್ರತ್ಯಯಗಳ ಜೊತೆಗೂಡಿ ಬರುವುದನ್ನು ತೋರಿಸಿದ್ದಾನೆ.

ಉದಾ: ಬುಧರ್+ಕಳ್= ಬುಧರ್ಕಳ್, ಗೋವರ್+ಕಳ್= ಗೋವರ್ಕಳ್, ತಾಯ್ವಿರ್ಕಳ್.
ಇರ್/ ವಿರ್ ಎಂಬ ಪ್ರತ್ಯಯಗಳಿಗೆ ಬದಲಾಗಿ ಕಳ್ / ಗಳ್ ಬರಬಹುದು
ಉದಾ: ಅತ್ತೆವಿರ್ / ಅತ್ತೆಗಳ್, ತಂದೆವಿರ್ / ತಂದೆಗಳ್, ಅಣ್ಣಂದಿರ್ / ಅಣ್ಣಂಗಳ್. ಹೀಗೆ ಕಳ್ / ಗಳ್ ಪ್ರತ್ಯಯವು ಹೆಚ್ಚು ವ್ಯಾಪ್ತಿಯನ್ನು ಹೊಂದಿರುವುದರಿಂದ ಕೇಶಿರಾಜನು 'ಗಳ್' ಎಂಬುದೇ ಮೂಲ ಬಹುವಚನ ಪ್ರತ್ಯಯವೆಂದು ಭಾವಿಸಿ ಉಳಿದ ಪ್ರತ್ಯಯಗಳು ಅದಕ್ಕೆ ಆದೇಶವಾಗಿ ಬರುತ್ತವೆಂದು ಹೇಳಿದ್ದಾನೆ.

ಬಹುವಚನ ಪ್ರತ್ಯಯಗಳನ್ನು ಗೌರವಾರ್ಥದಲ್ಲಿ, ಅಪಹಾಸ್ಯದಲ್ಲಿ, ಔಪಚಾರಿಕ ಅರ್ಥದಲ್ಲಿ ಬಳಸಬಹುದೆಂದು ತಿಳಿಸಲಾಗಿದೆ.

ತಂದೆಗಳ್, ತಾಯಿಗಳ್, ಗುರುಗಳ್ ಎಂದು ಹೇಳುವಾಗ ಇದು ರೂಢಿಯಲ್ಲಿ ಅನೌಚಿತ್ಯವಾಗಿ ಬರುತ್ತದೆ ಎನ್ನುತ್ತಾನೆ. ಹಾಸ್ಯ ಅಥವಾ ವ್ಯಂಗ್ಯವಾಗಿ ಬಳಸುವಾಗ ಬಡವಾದಿರಿ ಅರಸ, ಕಡಲೆಗಳೇಂ ನಿಮ್ಮ ಉಡಿಯೊಳಗೆ ಎಂಬಂತಹ ಉದಾಹರಣೆಗಳನ್ನು ಕೊಡುತ್ತಾನೆ. ಆಧುನಿಕರೂ ಕೂಡ ತಿರಸ್ಕಾರಕ್ಕೆ ವ್ಯಂಗ್ಯಕ್ಕೆ ಬಹುವಚನ ಬಳಸುತ್ತಾರೆ. ದಯಮಾಡಿಸಬೇಕು, ನಮಸ್ಕಾರ ಸ್ವಾಮಿ, ದೊಡ್ಡವರು ಮುಂತಾದ ಪ್ರಯೋಗಗಳನ್ನು ಈಗಲೂ ಕೇಳುತ್ತೇವೆ.

ಬಹುವಚನದ ಬಗ್ಗೆ ಮುಖ್ಯಾಂಶಗಳು ಹೀಗಿವೆ.

1. ಗಳ್ / ಕಳ್ ಎಂಬುವು ನಪುಂಸಕಲಿಂಗಗಳ ಮೇಲೂ, ಒಮ್ಮೊಮ್ಮೆ ಪುಲ್ಲಿಂಗ, ಸ್ತ್ರೀಲಿಂಗಗಳ ಮೇಲೂ ಬರುತ್ತವೆ.
2. ಸರ್ವನಾಮ, ಗುಣವಚನಗಳಲ್ಲಿ ವು / ಅವು ಬರುತ್ತವೆ.
3. ಪುಲ್ಲಿಂಗ, ಸ್ತ್ರೀಲಿಂಗಗಳಲ್ಲಿ ಅರ್, ಏರ್, ಏರ್, ಇರ್ ಪ್ರತ್ಯಯಗಳು ಬರುತ್ತವೆ.
4. ಈ ಪ್ರತ್ಯಯಗಳು ಬಂದು ಸೇರುವಾಗ ಕೆಲವು ಬದಲಾವಣೆಗಳಾಗುತ್ತವೆ. ಅಕ್ಷರ ಲೋಪ / ಬಿಂದು ಆಗಮ / ಯ ಕಾರಾಗಮ ವ ಕಾರಾಗಮ ಕಂಡು ಬರುತ್ತವೆ.
5. ಬಹುವಚನದ ಬಳಕೆ ಕೆಲವು ವಿಶೇಷಾರ್ಥಗಳಲ್ಲಿಯೂ ಆಗುತ್ತದೆ.

## 2.6.2. ವಿಭಕ್ತಿ ಪ್ರತ್ಯಯಗಳು

'ಮಮಿಂಕೆಯುದದೊಳ್' [ಸೂತ್ರ 103] ಎಂಬುದನ್ನು ನೀವು ಕೇಳಿರಲಾರಿರಿ. ಏಕೆಂದರೆ ಇದು ಸಪ್ತ ವಿಭಕ್ತಿ ಪ್ರತ್ಯಯಗಳ ಸಂಕಲಿತ ರೂಪವಾಗಿದೆ. ನಾವು ಮುಖ್ಯವಾಗಿ ಎರಡು ವಿಭಕ್ತಿ ಪತ್ಯಗಳೆಯನ್ನು ಗುರುತಿಸುತ್ತೇವೆ. ನಾಮ ಪ್ರಕೃತಿಯ ಮೇಲೆ ಹತ್ತುವ ವಿಭಕ್ತಿಗಳಿಗೆ ನಾಮ ವಿಭಕ್ತಿಗಳೆಂದೂ ಕ್ರಿಯೆಯ ಧಾತುಗಳ ಮೇಲೆ ಹತ್ತುವ ವಿಭಕ್ತಿಗಳಿಗೆ ಆಖ್ಯಾತ ವಿಭಕ್ತಿಗಳೆಂದೂ ಹೆಸರು. ವಿಭಕ್ತಿ ಎಂಬ ಹೆಸರು ಏಕೆ ಬಂತು ಎಂಬುದನ್ನು ಕೇಶಿರಾಜನೇ ತಿಳಿಸುತ್ತಾನೆ. 'ಶಬ್ದದೊಳಿರ್ದರ್ಥಮಂ ತಂತಮ್ಮನುಗುಣವಾಗಿ ವಿಭಾಗಿಸಿ ಕುಡುವುದರಿಂದ ವಿಭಕ್ತಿಗಳೆನಿಸುಗುಂ' ಎಂದು 45 ನೇ ಸೂತ್ರದಲ್ಲಿ ಹೇಳಲಾಗಿದೆ. ಒಂದು ಅರ್ಥದಿಂದ ಇನ್ನೊಂದನ್ನು ಪ್ರತ್ಯೇಕಿಸಿ ತಿಳಿಸುವುದರಿಂದ ಅದನ್ನು ವಿಭಕ್ತಿ ಎಂದು ಕರೆಯಲಾಗಿದೆ. ಮಮಿಂಕೆಯುದದೊಳ್= ಮ್, ಅಮ್, ಇಮ್, ಕೆ, ಅತ್, ಅತ್, ಒಳ್.
ನಾಮ ಪ್ರಕೃತಿಯ ಮೇಲೆ ಹತ್ತುವ ವಿಭಕ್ತಿಗಳ ಸಂಬಂಧವನ್ನು ತಿಳಿಸುವ ಪಟ್ಟಿಯನ್ನು ನೋಡಿ.

ವಿಭಕ್ತಿ ಪ್ರತ್ಯಯಗಳು ಮತ್ತು ಕಾರಕ / ಸಂಬಂಧಗಳು

| ವಿಭಕ್ತಿ | ಪ್ರತ್ಯಯ | ಉದಾಹರಣೆ<br>ಕ್ರಿಯಾಪದಕ್ಕೆ ಇರುವ ಸಂಬಂಧ | ಕಾರಕ / ಸಂಬಂಧಾರ್ಥ |
|---|---|---|---|
| ಪ್ರಥಮ | ಮ್ | ಮರನಿರ್ದುದು<br>ಕರ್ತೃಸಂಬಂಧ | ಕರ್ತೃಕಾರಕ |
| ದ್ವಿತಿಯ | ಅಮ್ | ಮರದಿಂ ಕಡಿ<br>ಕರ್ಮಸಂಬಂಧ | ಕರ್ಮಕಾರಕ |
| ತೃತೀಯ | ಇಂ | ಮರದಿಂ<br>ಉಪಕರಣ | ಕರಣಕಾರಕ |
| ಚತುರ್ಥೀ | ಕ್ಕೆ / ಗೆ | ಮರಕ್ಕೆ ಜೆ ನೀರಂ<br>ಸಂಪ್ರದಾನ | ಸಂಪ್ರದಾನಕಾರಕ |
| ಪಂಚಮೀ | ಅತ್ತಣಿಂ | ಮರದತ್ತಣಿಂ ಎಲೆ ಬಿದ್ದುದು<br>ಅಗಲಿಕೆ | ಅಪಾದಾನಕಾರಕ |
| ಷಷ್ಠಿ | ಅ[ತ್] | ಮರದ (ದು) ಪಣ್ | ಸಂಬಂಧಕಾರಕ |
| ಸಪ್ತಮೀ | ಒಳ್/ಅಲ್ಲಿ | ಮರದೊಳ್<br>ಆಶ್ರಯ | ಅಧಿಕರಣಕಾರಕ |

ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯದ ಅಗತ್ಯವಿಲ್ಲ ಎಂಬ ಅಭಿಪ್ರಾಯವಿದೆ. ನಾಮಪ್ರಕೃತಿಯೇ ಸಾಕಾಗುತ್ತದೆಂದು ಭಾಷಾವಿಜ್ಞಾನಿಗಳು ವಾದಿಸುತ್ತಾರೆ. ಕೇಶಿರಾದನು ಪ್ರಥಮಾ ವಿಭಕ್ತಿಯ ಸ್ಥಾನವನ್ನು ಬಿಂದು (ಸೊನ್ನೆ)ವಿಗೆ ಕೊಟ್ಟಿದ್ದಾನೆ. ಪ್ರತ್ಯಯವೇ ಇಲ್ಲದೆ ವ್ಯವಹಾರ ಸಾಧ್ಯವಿಲ್ಲ ಎಂಬ ಕಲ್ಪನೆಯು ಆತನಿಗೆ ಇದ್ದಿತುಯ ಏಕವಚನದಲ್ಲಿ ಬಿಂದುವು ಇದ್ದು ಬಹುವಚನದಲ್ಲಿ ಇರುವುದಿಲ್ಲ ಎಂಬುದು ತರ್ಕಬದ್ಧವಾದ ಮಾತು ಎನ್ನಿಸಿಕೊಳ್ಳುವುದಿಲ್ಲ ಉದಾಹರಣೆಗೆ ವೇದವಿದಂ, ಪರಹಿತಂ ಮುಂತಾದುವುಗಳಲ್ಲಿರುವ ಬಿಂದವು ಪ್ರಕೃತಿಯ ಅವಿಭಾಜ್ಯ ಅಂಗವಾಗಿರುವುದರಿಂದಲೇ ಸಂಧಿಯಾದಾಗ, ಸಮಾಸವಾದಾಗ 'ನ' ಕಾರವಾಗಿ ಬದಲಾವಣೆ ಹೊಂದುತ್ತದೆ. ವೇದವಿದಂ+ಅಲ್ಲಿ= ವೇದವಿದನಲ್ಲಿ ಎನ್ನುವಾಗ 'ನ' ಕಾರ ಬಂದಿರುವುದು ಕಂಡುಬರುತ್ತದೆ. ಮರಂ ಎಂಬಲ್ಲಿ ಬಿಂದುವು ಪ್ರಥಮಾ ವಿಭಕ್ತಿಯೆಂದು ತಿಳಿದರೆ ಮರಗಳ್ ಎಂಬಲ್ಲಿಯೂ ಬಿಂದು ಇರಬೇಕಾಗಿತ್ತು ಎಂದು ವಾದ ಮಾಡುತ್ತಾರೆ. ಮರಂಗಳ್ ಎಂದು ಹೇಳಬೇಕೆಂದು ಕೇಶಿರಾಜನ ಅಭಿಪ್ರಾಯವಿದೆ. ಅಕಾರಾಂತವಲ್ಲದ ಕರು, ಕುರಿ, ಮರಿ, ಮುಂತಾದ ಪ್ರಕೃತಿಗಳಲ್ಲಿ ಬಿಂದುವು ಕಂಡು ಬರುವುದಿಲ್ಲ. ಅದ್ದರಿಂದ ಭಾಷಾಶಾಸ್ತ್ರಜ್ಞರು 'ಪ್ರಕೃತಿಯೇ ಪ್ರಥಮಾ ವಿಭಕ್ತಿಯ ಅರ್ಥದಲ್ಲಿ ಪ್ರಯೋಗವಾಗುತ್ತದೆ' ಎಂದಿದ್ದಾರೆ.

ದ್ವಿತೀಯ ವಿಭಕ್ತಿಯ ಪ್ರತ್ಯಯ 'ಅಮ್'. ಇದು ಅಕಾರಾಂತ ನಪುಂಸಕ ಲಿಂಗ ಶಬ್ದಗಳಿಗೆ ಹತ್ತಿದಾಗ 'ನ' ಕಾರವಾಗುತ್ತದೆಂದೂ ಕೇಶಿರಾಜನು ಹೇಳುತ್ತಾನೆ. ಸಂಸ್ಕೃತದ ಪ್ರಕೃತಿಯಾದರೆ ಮಕಾರವೇ ನಿತ್ಯವೆಂದು ಹೇಳಿದ್ದಾನೆ.

ಬೆಟ್ಟಂ+ ಅಮ್= ಬೆಟ್ಟಮಂ . ಕೊಳ್ಳಂ +ಅಮ್ = ಕೊಳ್ಳಮಂ, ಇತ್ಯಾದಿ ಆದರೆ ಪೊಲಂ +ಅಮ್ = ಪೊಲನಂ, ನೆಲಂ+ ಅಮ್ = ನೆಲನಂ ಎಂದೂ ಆಗುವುದನ್ನು ನೋಡುತ್ತೇವೆ. ಸಂಸ್ಕೃತ ಪ್ರಕೃತಿಗಳಾದರೆ ಮಕಾರವು ಕಡ್ಡಾಯ ವೃಕ್ಷಂ+ ಅಮ್= ವೃಕ್ಷಮಂ, ಚಲಂ + ಅಮ್= ಚಲಮಂ. ಈಗ ಅನ್ನು ಎಂಬ ಪ್ರತ್ಯಯವು ಎಲ್ಲ ಶಬ್ದಗಳಿಗೂ ಸೇರುತ್ತದೆ.

ತೃತೀಯಾ ವಿಭಕ್ತಿ ಪ್ರತ್ಯಯವು ಇಂ, ಇಂದಂ, ಇಂದೆ ಎಂದು ಮೂರು ತೆರನಾಗಿದೆ. ಈ ಮೂರು ಪ್ರತ್ಯಯಗಳಿಗೆ ಆದೇಶವಾಗಿ 'ಎ' ಎಂಬುದು ಬರುವುದುಂಟು ಉದಾ. ಬಳಸಿಂ, ತಟಿಯಿಂದಂ, ಕುಡಿಯಳ್ಳಿಗಳಿಂದೆ. ಆದೇಶವಾದ 'ಎ' ಗೆ ಉದಾ : ಕ್ರಮದೆ, ನಯದೆ, ಭಯದೆ ಇತ್ಯಾದಿ. ಆಧುನಿಕ ಕಾಲದಲ್ಲಿ ಇಂದ ಎಂಬ ಪ್ರತ್ಯಯವು ರೂಢಿಯಲ್ಲಿದೆ. ಪ್ರಕೃತಿಗೆ ಅಥವಾ 'ಲಿಂಗ' ಗಳಿಗೆ ಇಂದ ಸೇರುವಾಗ 'ದ' ಎಂಬುದು ಆಗಮವಾಗುತ್ತದೆ. ಕಲ್ಲನ್ನು ಮಣ್ಣನ್ನು ಎನ್ನುವಾಗ ಯಾವ ವರ್ಣವೂ ಆಗಮವಾದುವುದಿಲ್ಲ. ಸಂದರ್ಭೋಚಿತವಾಗಿ 'ವ' 'ನ' 'ಯ' ವರ್ಣಗಳೂ ಆಗಮವಾಗುತ್ತವೆ.

ಚತುರ್ಥೀ ವಿಭಕ್ತಿಯ ಪ್ರತ್ಯಯ ಗೆ / ಕ್ಕೆ. ಇವು ಪರ್ಯಾಯ ಪ್ರತ್ಯಯಗಳು. ಉದಾ: ಬ್ರಾಹ್ಮಣಂಗೆ, ಗೋವಿಂಗೆ, ಕೂಸಿಂಗೆ, ಪಶುವಿಂಗೆ ದುಂಬಿಗೆ, ಪುಲಿಗೆ, ಸಿರಿಗೆ, ಕವಿಗೆ...... ಪಾಪಕ್ಕೆ ಸಿಂಹಕ್ಕೆ , ಜಗಕ್ಕೆ, ಕಬ್ಬಕ್ಕೆ, ಮರಕ್ಕೆ.....
ಚತುರ್ಥಿಯು ಸಂಪ್ರದಾನಾರ್ಥ ಹೊಂದಿದೆ. ಇದಕ್ಕೆ ಪಡೆದುಕೊಳ್ಳುವುದು, ಹೊಂದುವುದು ಮುಂತಾದ ಅರ್ಥಗಳಿವೆ.

ಪಂಚಮೀ ವಿಭಕ್ತಿಯು ಪ್ರಥಮಾ ವಿಭಕ್ತಿಯಂತೆ ಆಧುನಿಕರ ವಾದಕ್ಕೆ ಗುರಿಯಾಗಿದೆ. ಕೇಶಿರಾಜನು ತನ್ನ ಕಾಲದಲ್ಲಿ ಇದ್ದ ಪದ್ಧತಿಯನ್ನು ಪ್ರತಿಪಾದಿಸುತ್ತಾನೆ. ಪಂಚಮಿಯು ಅಪಾದಾನಾರ್ಥವನ್ನು ಸೂಚಿಸುತ್ತದೆ. ಅಪಾದಾನ ಎಂದರೆ ದೂರವಾಗುವುದು. ವೃತ್ತಿಯಲ್ಲಿ ಅಪಾದಾನ ವೆಂದಾವುದಾನೊಂದಕೆಂ ತೊಲಗುವುದು ಎಂದು ಹೇಳಲಾಗಿದೆ. ಒಂದರಿಂದ ಮತ್ತೊಂದು ಬಿಡುಗಡೆ ಹೊಂದುವುದ ಕೇಶಿರಾಜನು ಅತ್ತಣಿಂ ಎಂಬುದು ಪ್ರತ್ಯಯವೆಂದಿದ್ದಾನೆ. ಉದಾ: ಮರ+ಅತ್ತಣಿಂ =ಮರದತ್ತಣಿಂ [ದ ಆಗಮವಾಗಿದೆ]. ಕರೆಯತ್ತಣಿಂ, ತೊಜೆಯತ್ತಣಿಂ, ವನದತ್ತಣಿಂ, .............. ಮರದತ್ತಣಿಂ ಬಿದ್ದುದು, ಕೆರೆಯತ್ತಣಿಂ ಬಂದಂ, ...... ಹಣ್ಣು ಮರದಿಂದ ಬಿತ್ತು ಎಂದರೆ ಮರದಿಂದ ಅದು ದೂರವಾದಂತೆತಾನೆ. ಅದೇ ಅಪಾದಾನ ಎನ್ನುವುದು. ಕೆರೆಯುತ್ತಣಿಂ ಬಂದಂ ಎಂದರೆ ಕೆರೆಯಿಂದ ಅವನು ದೂರವಾದಂತೆ ಅಲ್ಲವೆ.

ಆಧುನಿಕರ ಮತದಲ್ಲಿ ತೃತೀಯ ವಿಭಕ್ತಿ ಮತ್ತು ಪಂಚಮೀ ವಿಭಕ್ತಿಗಳನ್ನು ಇಂ, ಇಂದಂ, ಇಂದೆ ಎಂಬ ಪ್ರತ್ಯಯಗಳಿಂದಲೇ ಸೂಚಿಸಬಹುದಾದ್ದರಿಂದ ಪಂಚಮಿಯನ್ನು ಬಿಟ್ಟು ಬಿಡಬಹುದು ಎನ್ನುತ್ತಾರೆ. ಅಂದರೆ ಕೆರೆಯುತ್ತಗೆಂ ಎನ್ನುವ ಬದಲು ಕೆರೆಯಿಂ ಎನ್ನಿರಿ ಎಂಬ ಮಾತು. ಮರದಿಂದ ಹಣ್ಣು ಬಿತ್ತು, ಕೆರೆಯಿಂದ ಬಂದ ಎಂದು ಈಗ ಬಳಸುತ್ತೇವೆ ಅಲ್ಲವೇ? ಆದರೆ ನಿಜವಾಗಿಯೂ ತೃತೀಯೆಯು ಕರಣಾರ್ಥವಾಗಿದೆ. ಪಂಚಮಿಯು ವಿಯೋಗಾರ್ಥವಾಗಿದೆ. ಆದರೆ ಈಗ ಕೆರೆಯತ್ತಣಿಂ ಬಂದ ಎಂದರೆ ನಡೆಯುವುದಿಲ್ಲ. ಕಾಲದ ಮಹಿಮೆ ಹಾಗಿದೆ ಎನ್ನಬೇಕು.

ಷಷ್ಠೀ ವಿಭಕ್ತಿಯ ಪ್ರತ್ಯಯ ಅತ್ ಎಂಬುದು ಇದು ಮುಖ್ಯವಾಗಿ ಸಂಬಂಧಕಾರಕ. ವ್ಯಕ್ತಿ ವ್ಯಕ್ತಿಗಳ ನಡುವೆ, ವಸ್ತುಗಳ ನಡುವೆ ಇರುವ ಸಂಬಂಧವನ್ನು ಈ ಪ್ರತ್ಯಯ ಸೂಚಿಸುತ್ತದೆ. ಸಪ್ತವಿಭಕ್ತಿಗಳಲ್ಲಿ ಇನ್ನು ಆರು ವಿಭಕ್ತಿ ಪ್ರತ್ಯಯಗಳು ಕ್ರಿಯಾ ಪದದ ಸುತ್ತ ಸುತ್ತುತ್ತವೆ. ಆದರೆ ಷಷ್ಠೀ ವಿಭಕ್ತಿಯು ನಾಮಪದಗಳ ಸುತ್ತ ಸುತ್ತುತ್ತದೆ.

ಕೇಶಿರಾಜನು, ಅತ್ ಎಂಬುದು ' ಅ' ಎಂದು ಬಳಕೆಯಾಗುತ್ತದೆ ಎಂದು ಹೇಳುವುದರ ಜೊತೆಗೆ ವಿಷಾದ, ಸಂಭ್ರಮಗಳನ್ನು ವ್ಯಕ್ತಿಪಡಿಸುವವಾಗ ಆ ಎಂಬುದು ಬಳಕೆಯಾಗುತ್ತದೆ ಎಂದು ಹೇಳಿದ್ದಾನೆ. ಪಾರ್ವರ ಪಿಳ್ಳೆಯುಂ ಎಂಬಲ್ಲಿ [ಪಾರ್ವರ್+ಅ] ಎಂದು ಬಿಡಿಸಿದರೆ ಷಷ್ಠೀ ಗೋಚರಿಸುತ್ತದೆ. ಅಜನ ಮಗ, ಯಮನ ಸುತಂ........ಹಾಗೆಯೇ ಎಮ್ಮ ಸುತಂ, ನಿಮ್ಮ ಅಳಿಯಂ, ಎಮ್ಮ ತಮ್ಮಂ ಅನೆಯ ಘಟೆ, ಗಿಳಿಯ ಪಿಂಡು: ಮರದಕೊಂಬು, ಕೊಡೆಯಕಾವು; ಚೊಪ್ಪಿಗೆಯ ಮಾನಿಸಂ, ಸಿಂದದ ಕುದುರೆ, ಕಜಿಂಯಕೋಡಿ, ಊರ ಮುಂದು, ತೋಳಬಂದಿ, ಕಳಶದ ತಳಿರ್, ನೀರ ಹಾವಸೆ; ನೊಸಲಕಣ್ಣದೇವ, ತೋಳಬಾಳಕಾಂತಿ ಇತ್ಯಾದಿ.

ಷಷ್ಠಿಯ ಒಂದು ವಿಶೇಷವೆಂದರೆ ವಿಷಾದ ಸಂಭ್ರಮ, ವಿಧಿ ಸಂದರ್ಭಗಳಲ್ಲಿ 'ಅ' ಪ್ರತ್ಯಯವು 'ಆ' ಎಂಬ ರೂಪವನ್ನು ತಾಳುತ್ತದೆ.

1. ಮೃಡನಾ ಗಂಗಾಂಬುಧಾರಾ ಜಟಿಲಿತಜಟನಾ.......
2. ದೊರೆಯೆನಿಸಿತ್ತು ಭಾರತಕ್ಕೆ ಗೆಲ್ದ ರಣಂ ಕುವರಂಕರಾಮನಾ........ ಮೇಲಿನ ಎರಡು ಉದಾಹರಣೆಗಳು ದೀರ್ಘಾದೇಶಕ್ಕೆ ನಿದರ್ಶನಗಳಾಗಿವೆ.

ಸಪ್ತಮೀ ವಿಭಕ್ತಿ ಪ್ರತ್ಯಯವು ಸಾಮಾನ್ಯವಾಗಿ ಅಲ್ಲಿ ಮತ್ತು ಒಳ್. ಸಪ್ತಮಿಯು ಅಧಿಕರಣಕಾರಕ. ಯಾವುದು ಆಶ್ರಯ ಅಥವಾ ಆಧಾರ ನೀಡುತ್ತದೋ ಅದು ಅಧಿಕರಣ.
ಉದಾ: ಪಾಸಿನೊಳ್ ನಿದ್ರೆಗೆಯ್ದಂ: ದೇವರೊಳ್ ನಿರ್ದೋಷನಾಪ್ತಂ; ರತ್ನಂಗಳೊಳ್ ಮಾಣಿಕ್ಯಮುತ್ತಮಂ: ಕಾದುವರೊಳೀತಂ ಮೆಯ್ಗಲಿ; ಕಿವಿಯೊಳ್ ಪರ್ಚಿದಂ.

## 2.7. ಕೆಲವು ವಿಶೇಷಾಂಶಗಳು

### 2.7.0. ವಿಭಕ್ತಿ ಪಲ್ಲಟ

ಕೇಶಿರಾಜನು ವಿಭಕ್ತಿಗಳ ಸ್ವರೂಪವನ್ನು ತಿಳಿಸಿದ ನಂತರ 'ಇಂತೀ ಪೇಟ್ದ ವಿಭಕ್ತಿಗಳೆಂತುಂ ಪಲ್ಲಟಿಸುಗುಂ ಯಥೇಷ್ಟಂ' ಎಂದು ಹೇಳಿದ್ದಾನೆ. (ಸೂ 145). ಪಂಚಮೀ ವಿಭಕ್ತಿಯು ಬೇರೆ ಯಾವ ವಿಭಕ್ತಿಯ ಅರ್ಥವನ್ನೂ ವ್ಯಕ್ತಪಡಿಸುವುದಿಲ್ಲ. ಉಳಿದ ವಿಭಕ್ತಿಗಳು ಒಂದು ಅಥವಾ ಒಂದಕ್ಕಿಂತ ಹೆಚ್ಚು ವಿಭಕ್ತಿಗಳ ಅರ್ಥವನ್ನು ವ್ಯಕ್ತಪಡಿಸುತ್ತವೆ.
ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

ಪ್ರಥಮಾ ವಿಭಕ್ತಿ ಇರಬೇಕಾದ ಕಡೆ ದ್ವಿತೀಯಾ ಇರುವುದಕ್ಕೆ

'ಸುಣ್ಣಾಳ್ಪನೆಂದು ಹೇಳುವ ಬದಲು ಸುಣ್ಣಾಸುಳ್ಪಂ ಎನ್ನುವುದು'

ದ್ವಿತೀಯೆ ಬರಬೇಕಾದ ಕಡೆ ಷಷ್ಠೀಬಂದಿರುವುದಕ್ಕೆ

'ಎಲವೋ ನೇನೆನೆನಕೊಂದೆ'

ಪ್ರಥಮಾ ಬರಬೇಕಾದ ಕಡೆ ಷಷ್ಠೀ ಬಂದಿರುವುದಕ್ಕೆ

'ನಿಶ್ಶಂಕೆಯಿಂ ನೃಪನ ಪೇಟಿ'

ತೃತೀಯೆಗೆ ಬದಲು ದ್ವಿತೀಯೆ ಬಂದಿರುವುದಕ್ಕೆ

'ಪೂವನರ್ಚಿಸಿದಂ'

ಚತುರ್ಥಿಗೆ ಬದಲು ದ್ವಿತೀಯೆ

'ಪೊನ್ನಂ ಬಣ್ಣಿಯುಂ ಕೊಟ್ಟಂ '

ತೃತೀಯೆಗೆ ಬದಲು ಸಪ್ತಮಿ ಬಂದಿರುವುದು

'ಕೊಡಲಿಯೊಳ್ ಕಡಿದಂ'

ಇಂತಹ ಪ್ರಯೋಗಗಳನ್ನು ಕವಿಗಳು ತಮ್ಮ ಅನುಕೂಲಕ್ಕೆ ಮಾಡಿಕೊಂಡಿರುತ್ತಾರೆಂಬುದನ್ನು ತಿಳಿಯಬೇಕು.

### 2.7.1. ವಚನ ಪಲ್ಲಟ

ಏಕವಚನ ಮತ್ತು ಬಹುವಚನಗಳ ಸ್ವರೂಪವನ್ನು ತಿಳಿಸಿ ಕೆಲವು ಬಾರಿ ಬಹುವಚನ ಗೌರವಾರ್ಥದಲ್ಲಿ ಹಾಗೂ ವ್ಯಂಗ್ಯಾರ್ಥದಲ್ಲಿ ಪ್ರಯೋಗವಾಗುತ್ತದೆ ಎಂದು ಕೇಶಿರಾಜನು ತಿಳಿಸಿದ್ದಾನೆ. ಜಾತಿಯಲ್ಲಿ ಸಾಮೂಹಿಕ ವರ್ಗಕ್ಕೆ ಸೇರಿದ ನಪುಂಸಕಲಿಂಗ ವಾಚಕವು ಏಕವಚನದಲ್ಲಿಯೇ ಇದ್ದರೂ ಅದಕ್ಕೆ ಸಂಬಂಧಿಸಿದ ಕ್ರಿಯಾಪದದ ಮೂಲಕ ಬಹುವಚನಾರ್ಥವನ್ನು ಪಡೆಯುವುದು.
ಉದಾ. ಆನೆ ನೂಕಿದುವು ಕುರಿ ಬಂದುವು ಇತ್ಯಾದಿ. ಇಲ್ಲಿ ಆನೆ = ಆನೆಗಳು, ಕುರಿ = ಕುರಿಗಳು ಆನೆ, ಕುರಿ ಎಂಬುದು ಜಾತ್ಯೇಕ ವಚನ ಎನ್ನಿಸಿಕೊಳ್ಳುತ್ತದೆ.
ವಾಕ್ಯದ ಮೊದಲಲ್ಲಿ ಹಲವಾರು ವಿಶೇಷಣಗಳು ಪ್ರಥಮಾ ವಿಭಕ್ತಿ ರೂಪದಲ್ಲಿದ್ದರೂ ಕಡೆಯ ಕಾರಕ ಪದವು (ನಾಮಪದ) ಯಾವ ವಿಭಕ್ತಿಯಲ್ಲಿರುವುದೋ ಅದೇ ವಿಭಕ್ತಿ ಇತರ ಪ್ರಕೃತಿಗಳಿಗೂ ಅನ್ವಯಿಸುವುದು.
ಉದಾ: ವೀರನುದಾರಂ ಶುಚಿಗಂಭೀರಂ ನಯಶಾಲಿ ಕೃದುಪೊತ್ತರ ದೇವಂಗಾರೆಜಿಗರ್
ಮೂರು ಲಿಂಗಗಳನ್ನು ಒಳಗೊಂಡಿರುವ ಒಂದು ವಾಕ್ಯದಲ್ಲಿ ಯಾವೊಂದೂ ಲಿಂಗಕ್ಕೂ ಮುಖ್ಯತೆ, ಅಮುಖ್ಯತೆ ಎಂಬುದಿಲ್ಲ. ಆದರೆ ಕಡೆಯದು ಯಾವ ಲಿಂಗದಲ್ಲಿದೆಯೋ ಆ ಲಿಂಗಕ್ಕನುಸಾರವಾಗಿ ಬಹುವಚನ ಕ್ರಿಯಾಪದವು ಪ್ರಯೋಗವಾಗುವುದು
ಉದಾ. ಪಸೆಯುಮರಸನುಮರಸಿಯುಂ ಬಂದರ್
ಅರಸನುಮರಸಿಯುಂ ಚತುರಂಗಬಲಮು ಬಂದುವು

### 2.7.2 ಸರ್ವನಾಮಗಳು

ಸರ್ವನಾಮಗಳು ಒಂದು ಭಾಷೆಯ ಸ್ಥಿರವಾದ ಆಸ್ತಿ, ಅನ್ಯಭಾಷೆಯಿಂದ ಏನನ್ನು ಬೇಕಾದರೂ ಸ್ವೀಕರಿಸಬಹುದು. ಸರ್ವನಾಮಗಳನ್ನಲ್ಲ. ಹಳಗನ್ನಡದಲ್ಲಿ ಉತ್ತಮ ಪುರುಷ ಸರ್ವನಾಮಗಳಿಗೆ ಆನ್ ಆಮ್ ಮತ್ತು ನಾನ್, ನಾಮ್ ಎಂಬ ಎರಡು ರೂಪಾಗಳುಂಟು ನಡುಗನ್ನಡದಲ್ಲಿ ನಾನ್ ನಾಮ್ ಎಂಬುವು ಹೆಚ್ಚು ರೂಢಿಯಲಿದ್ದವು. ಮಧ್ಯಮ ಪುರುಷದಲ್ಲಿ ನೀನ್, ನೀಮ್ ಎಂಬುವು ತಾ, ತಾನು, ತಾವು ಎಂಬ ರೂಪಗಳನ್ನು ಪಡೆದಿವೆ.

ನೀನ್ ಆನ್ ತಾನ್ ಎಂಬ ಸರ್ವನಾಮಗಳು ಚತುರ್ಥಿ ವಿಭಕ್ತಿಯಲಿ

ನಿನಗೆ, ಎನಗೆ, ತನಗೆ ಎಂದಾಗುತ್ತವೆ.

ನಿಮ್ಮ ಎಮ್ಮ, ತಮ್ಮ ಎಂಬ ಸರ್ವನಾಮಗಳಿಗೆ ಸ್ವರಾದಿಯಾದ ಸಂಖ್ಯಾವಾಚಕಗಳು ಪರವಾದರೆ ಮಧ್ಯೆ ಉತು ಎಂಬುದು ಆಗಮವಾಗುತ್ತದೆ.

ನಿಮ್ಮ + ಇರ್ವರುಂ = ನಿಮ್ಮ+ ಉತು +ಇರ್ವರುಂ= ನಿಮ್ಮುತಿರ್ವರುಂ

ಎಮ್ಮ + ಐವರುಂ = ಎಮ್ಮ +ಉತು + ಐವರುಂ = ಎಮ್ಮುತ್ತೈವರುಂ

ಎತ್ತಣದು ಎಂಬುದನ್ನು ಎತ್ತಣ್ಣು ಎಂಬುದಾಗಿಯು ಆರದು ಎಂಬುದನ್ನು ಆರ್ತು ಎಂಬುದಾಗಿಯೂ ಹೇಳಬಹುದು.

ಉದಾ. ದೆಸೆಯೆತ್ತಣ್ಣಾಗಸಮೆತ್ತಣ್ಣು : ಆರ್ತೀತುರಂಗಂ

### 2.7.3 ಪಕಾರ ವಿಚಾರ (ಪ > ಹ )

ಕೇಶಿರಾಜನು 'ಪಕಾರ ವಿಕಲ್ಪವಾಗಿ ಹಕಾರ ಬರುವುದೆಂದೂ, ಪಕಾರದ್ವಿತ್ವಕ್ಕೆ ಸಾಧಾರಣವಾಗಿ ಹಕಾರಾದೇಶವಿಲ್ಲವೆಂದೂ ಇದು ದೇಶಿಯಲ್ಲಿ ಸೊಗಸು' ಎಂದೂ ಹೇಳಿದ್ದಾನೆ. ವೃತ್ತಿಯಲ್ಲಿ 'ದ್ವಿತ್ವದೊಳ್ ಪಿರಿದುಂ ಪಕಾರಕ್ಕೆ ಹಕಾರಮಿಲ್ಲ' ಎಂದಿದ್ದಾನೆ.

ಉದಾ ಪಲಗೆ >ಹಲಗೆ : ಪದರ್ >ಹದರ್ : ಪುಲಿ >ಹುಲಿ

ತಪ್ಪು, ಟಿಪ್ಪಣಿ, ಪುಪ್ಪುರಿ, ಕಪ್ಪುರ,

ಕೆಲವೊಮ್ಮೆ ಪದ್ವಿತ್ವ ಹಕಾರವಾಗುತ್ತದೆ. ಅಂತಪ್ಪಂ > ಅಂತಹಂ

ಇಂತಪ್ಪಂ > ಇಂತಹಂ, ಉಂತಪ್ಪಂ > ಉಂತಹಂ

ಪಕಾರಾವು ಹಕಾರವಾಗಲು ಉಚ್ಚಾರಣೆಯೇ ಪ್ರಧಾನವೆಂದು ಹೇಳಬಹುದು.

---

## 2.8 ಪರೀಕ್ಷಾ ವಿಷಯ

---

### 2.8.0 ಸ್ವಪರೀಕ್ಷೆ ಪ್ರಶ್ನೆಗಳು

೧. ಸಂಧಿ ಎಂದರೇನು?

..........................................................................................................

..........................................................................................................

..........................................................................................................

೨. ಆಗಮ ಸಂಧಿ ಯಾವುದು ?

೩. ವಿಸಂಧಿ ನಿಯಮಗಳಾವುವು ?

೪. ಶ್ರುತಿ ಕಷ್ಟಸಂಧಿ ಯಾವುದು?

೫. ದ್ವಿತ್ವ ಸಂಧಿ ಎಂದರೇನು ?

೬. ' ಲಿಂಗ ' ಎಂಬ ಶಬ್ದಕ್ಕೆ ಕೇಶಿರಾಜನ ಕಲ್ಪನೆ ಯಾವುದು ?

೭. ನಾಮಲಿಂಗದ ಬಗೆಗಳಾವುವು ?

೮. ಕನ್ನಡದಲ್ಲಿ ಲಿಂಗಗಳು ಎಷ್ಟು ?

೯. ಕೇಶಿರಾಜನ ದೃಷ್ಟಿಯಲ್ಲಿ ಬಹುವಚನ ಪ್ರತ್ಯಯ ಯಾವುದು ?

೧೦. ವಿಭಕ್ತಿ ಪ್ರತ್ಯಯಗಳು ಎಷ್ಟು ? ಪಂಚಮೀ ಬಗ್ಗೆ ತಿಳಿಸಿ

....................................................................................................

....................................................................................................

....................................................................................................

೧೧. ವಿಭಕ್ತಿ ಪಲ್ಲಟ ಎಂದರೇನು ?

....................................................................................................

....................................................................................................

....................................................................................................

೧೨. ಪ್ರತ್ಯೇಕ ವಚನದ ಬಗ್ಗೆ ತಿಳಿಸಿ

....................................................................................................

....................................................................................................

....................................................................................................

## 2.8.1 ಸ್ವಪರೀಕ್ಷೆ ಪ್ರಶ್ನೆಗಳಿಗೆ ಉತ್ತರಗಳು

೧. ಎರಡು ಅಕ್ಷರಗಳ ನಡುವೆ ಉಂಟಾಗುವ ಸೇರುವಿಕೆ. ಕಾಲವಿಳಂಬವಿಲ್ಲದೆ, ಅರ್ಥಕೆಡದಂತೆ ಅವುಗಳು ಸೇರಬೇಕು. ಸಂಧಿಯಲ್ಲಿ ಸೇರುವುದು ವರ್ಣಗಳು, ಸಮಾಸದಲ್ಲಿ ಸೇರುವುದು ಪದಗಳು.

೨. ಸಂಧಿಯಾಗುವಾಗ ಎರಡು ಸ್ವರಗಳು ಮಧ್ಯೆ ಅರ್ಥಭಾವವು ಕೆಡದಂತೆ ಬೇರೊಂದು ವರ್ಣವು ಆಗಮಿಸುವುದಾದರೆ ಅದನ್ನು ಆಗಮ ಸಂಧಿ ಎನ್ನುತ್ತಾರೆ. ಕನ್ನಡದಲ್ಲಿ ಯ ಮತ್ತು ವ ವರ್ಣಗಳು ಹೀಗೆ ಮಧ್ಯೆ ಬಂದು ಸೇರುತ್ತವೆ. ಇದನ್ನು ಯಕಾರಾಗಮ ಸಂಧಿ ಮತ್ತು ವಕಾರಗಮ ಸಂಧಿ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಕೆಲವು ಸಲ ಯಕಾರ ವಕಾರಗಳ ಆಗಮವಾಗದಿರಬಹುದು. ಆದರೆ ಸಂಸ್ಕೃತ ಶಬ್ದಗಳ ವಿಷಯದಲ್ಲಿ ಯಕಾರ ವಕಾರ ಆಗಮವು ಕಡ್ಡಾಯವಾಗಿದೆ.
ಕಲಿ +ಆರ್ = ಕಲಿಯಾರ್, ಕುಡು + ಉದು = ಕುಡುವುದು
ಮೇಳ + ಇಸು = ಮೇಳಯಿಸು , ಒತ್ತೆ +ಇಟ್ಟಂ = ಒತ್ತೆಯಿಟ್ಟಂ / ಒತ್ತಿಟ್ಟಂ
(ಸಂಸ್ಕೃತದ ಶಬ್ದ ) ವಿಧು + ಇಲ್ಲದ = ವಿಧುವಿಲ್ಲದ.

೩. ವಿಸಂಧಿ ಎಂದರೆ ಸಂಧಿಯಾಗದಿರುವುದು. ಎಏ, ಒಓ ವರ್ಣಗಳಿಂದ ಕೊನೆಯಾಗುವ ಶಬ್ದಗಳ ಮುಂದೆ ನಿಪಾತ, ಅವಧಾರಣೆ, ವಿಶಂಕೆಗಳನ್ನು ಸೂಚಿಸುವ ಅವ್ಯಯಗಳಿಗೆ ಸ್ವರವು ಪರವಾದಾಗ ಸಂಧಿಯಾಗುವುದಿಲ್ಲ, ಪ್ಲುತ ಇದ್ದರೂ ಸಂಧಿಯಾಗದು.
ಅರಮೆ+ ಅರಲ್ಪ = ಅರಮೆ ಅರಲ್ಪ, ಆನೆಯೊ+ ಅದ್ರಿಯೊ = ಆನೆಯೊ ಅದ್ರಿಯೊ ........
ಕು ಕ್ಕೂ ಕ್ಕೋ + ಎಂದು = ಕು ಕ್ಕೂ ಕ್ಕೋ ಎಂದು

೪. ಶ್ರುತಿ ಕಷ್ಟಸಂಧಿ ಎದಂರೆ ಉಚ್ಚರಿಸಲು ತ್ರಾಸವಾಗುವಂತೆ ಸಂಧಿಯನ್ನು ಮಾಡುವುದು. ಎರಡು ರೇಫೆಗಲನ್ನು ಸೇರಿಸಿ ಸಂಧಿ ಮಾಡಿದರೆ ಉಚ್ಚಾರವೂ ಕಷ್ಟ, ಕಿವಿಗೂ ಹಿಂಸೆ. ಅವು ಕಿವಿಗೆ ಕರಡೆಯ ಗಿರ್ಗಿಟೆಯ ಸದ್ದಿನಂತೆ ಕರ್ಕಶವಾಗಿರುತ್ತವೆ. ಎರಡಕ್ಕಿಂತ ಹೆಚ್ಚು ವರ್ಣಗಳು ಸೇರಿ ಸಂಧಿಯಾದಾಗಲು ಶ್ರುತಿ ಕಷ್ಟವಾಗುತ್ತದೆ.
ಬಂದರ್ + ರಾಮರ್ = ಬಂದರ್ರಾಮರ್ : ವಿದ್ವಿಟ್ಸ್ತ್ರೀಯರ್.........

೫. ಪೂರ್ವಪದದ ಆರಂಭವು ಹ್ರಸ್ವದಿಂದ ಕೂಡಿದ್ದು ನಣಲಯಳ ಕಾರಗಳು ಅಂತ್ಯದಲ್ಲಿದ್ದರೆ ಅದಕ್ಕೆ ಸ್ವರ ಪರವಾದಾಗ ದ್ವಿತ್ವಸಂಧಿ ಘಟಿಸುತ್ತದೆ ಪೊನ್ + ಉಳ್ಳ = ಪೊನ್ನುಳ್ಳ : ಕಲ್+ಎಲ್ಲಂ =ಕಲ್ಲೆಲ್ಲಂ : ಮೆಯ್ + ಅನ್ನು = ಮೆಯ್ಯನ್ನು ಪೂರ್ವಪದಾದಿ ದೀರ್ಘವಾಗಿದ್ದರೆ ದ್ವಿತ್ವ ಸಂಧಿ ಘಟಿಸುವುದಿಲ್ಲ.

ಬಾನ್ + ಉದ್ದಂ = ಬಾನುದ್ದಂ

ಅನೇಕಾಕ್ಷರಗಳಿಂದ ಪೂರ್ವಪದ ಕೂಡಿದ್ದರೂ ದ್ವಿತ್ವ ಸಂಧಿ ಉಂಟಾಗುವುದಿಲ್ಲ

ಕಲಿದಲ್ + ಇವಂ = ಕಲಿದಲಿವಂ, ಸವಣ್ + ಆರ್ = ಸರ್ವಣಾರ್

೬. ಕೇಶಿರಾಜನು ನಾಮಪ್ರಕೃತಿಗಳಿಗೆ 'ಲಿಂಗ' ಎಂಬ ಹೆಸರನ್ನು ಕೊಟ್ಟಿದ್ದಾನೆ. ಇದಕ್ಕೂ ಸ್ತ್ರೀ ಪುರುಷ ಇತ್ಯಾದಿಗಳನ್ನು ಸೂಚಿಸಲು ಹೇಳುವ ಲಿಂಗಕ್ಕೂ ಏನೇನೂ ಸಂಬಂಧವಿಲ್ಲ ' ಕ್ರಿಯೆಯಂ ನುಡಿಯದುದು, ವಿಭಕ್ತಿಯಿಲ್ಲದುದು, ಅರ್ಥಮುಳ್ಳುದು ಲಿಂಗಂ ......' ಇದರಲ್ಲಿ ನಾಲ್ಕು ಬಗೆ ಕೃಲ್ಲಿಂಗ, ತದ್ಧಿತಲಿಂಗ , ನಾಮಲಿಂಗ. ಈ ಲಿಂಗಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಬಹುದು.

ಕೃಲ್ಲಿಂಗ : ಮಾಡಿದಂ, ಮಾಡಿದನಂ, ಮಾಡಿದನಿಂ, ಮಾಡಿದಂಗೆ.......

ತದ್ಧಿತಲಿಂಗ : ಕಂಚುಗಾರಂ, ಕಂಚುಗಾರನಂ, ಕಂಚುಗಾರನಿಂ, ಕಂಚುಗಾರಂಗೆ......

ಸಮಾಸಲಿಂಗ : ತೆಂಗಾಳಿ, ತೆಂಗಾಳಿಯಂ, ತೆಂಗಾಳಿಯಿಂ, ತೆಂಗಾಳಿಗೆ..............

ನಾಮಲಿಂಗ : ರಾಮ, ರಾಮನಂ, ರಾಮನಿಂ, ರಾಮಂಗೆ.........

೭. ಕೇಶಿರಾಜನು ಹೇಳುವ 'ಲಿಂಗ' ಪ್ರಭೇದಗಳಲ್ಲಿ ನಾಮಲಿಂಗವೇ ಹೆಚ್ಚು ವ್ಯಾಪ್ತಿಯನ್ನು ಹೊಂದಿರುವುದು. ನಾಮಲಿಂಗ ಎಂಬುದು ಸಾಮಾನ್ಯವಾಗಿ ಪ್ರಕೃತಿರೂಪವೇ ಆಗಿರುತ್ತದೆ. ಇವುಗಳನ್ನು ಸಹಜಪ್ರಕೃತಿಗಳು ಎನ್ನುತ್ತಾರೆ. ನಾಮಲಿಂಗದಲ್ಲಿ ಮೂರು ವಿಧ ರೂಢನಾಮ, ಅಂಕಿತನಾಮ, ಅನ್ವರ್ಥನಾಮ.

ರೂಢನಾಮ : ಮರ, ಗಿಡ, ಅರಸ, ಕಲ್ಲು, ತಲೆ, ಇತ್ಯಾದಿ

ಅಂಕಿತನಾಮ : ರಾಮ, ಬಸವ, ಜಾನ್, ಅಹಮದ್, ಶಿವಣ್ಣ, ಮಮತ.....

ಅನ್ವರ್ಥನಾಮ : ಕುರುಡ, ಕುಂಟ, ಅಭಿಮಾನಿ, ಮುಂಗೋಪಿ, ದಾನಿ.....

೮. ಕನ್ನಡದಲ್ಲಿ ಲಿಂಗಗಳು ಮೂರು : ಪುಲ್ಲಿಂಗ ಸ್ತ್ರೀಲಿಂಗ, ನಪುಂಸಕ ಲಿಂಗ, ಕೇಶಿರಾಜನು ಕನ್ನಡದಲ್ಲಿ ಒಂಬತ್ತು ಲಿಂಗಗಳು ಇವೆ ಎಂದು ಹೇಳಿ, ಅನಂತರ ಮುಖ್ಯವಾದುವು ಮೂರು ಲಿಂಗಗಳು ಎಂದಿದ್ದಾನೆ. ಪುರುಷರು ಮತ್ತು ಸ್ತ್ರೀಯರು ಕ್ರಮವಾಗಿ ಪುಂ, ಸ್ತ್ರೀ ಲಿಂಗಗಳಾದರೆ ವಸ್ತುಗಳು ಮಕ್ಕಳು, ಪ್ರಾಣಿಗಳು ನಪುಂಸಕಲಿಂಗವಾಗುತ್ತವೆ. ಇದನ್ನು ನೋಡಿದರೆ ಬುದ್ಧಿ ಪ್ರಧಾನವಾದುದು ಒಂದು ಗುಂಪು, ಬುದ್ಧಿ ಪ್ರಧಾನವಲ್ಲದ್ದು ಇನ್ನೊಂದು ಗುಂಪು ಎಂದು ತೋರುತ್ತದೆ. ದ್ರಾವಿಡ ಭಾಷೆಯಲ್ಲಿ ಈ ಕ್ರಮವೇ ಇದ್ದುದಕ್ಕೆ ತಮಿಳು ತೆಲುಗುಗಳಲ್ಲಿರುವ ಲಿಂಗವಿವಕ್ಷೆಯು ನಿದರ್ಶನವಾಗಿದೆ.

೯. ಕೇಶಿರಾಜನ ಪ್ರಕಾರ ಗಳ್ (ಕಳ್) ಎಂಬುದೇ ಮೂಲಬಹುವಚನ ಪ್ರತ್ಯಯವಾಗಿದೆ. ಉಳಿದ ಪ್ರತ್ಯಯಗಳು 'ಗಳ್' ಗೆ ಆದೇಶವಾಗಿ ಬಂದಿವೆ ಎಂದು ಹೇಳಿದ್ದಾನೆ. ಇರ್, ವಿರ್, ದಿರ್,

ಅರ್ ಘಟಿತವಾದವು 'ಗಳ್' ಗೆ ಆದೇಶವಾಗಿ ಬಂದಿವೆ ಎಂದು ಹೇಳಿದಂತಾಯಿತು. 'ಅರ್' ಪ್ರತ್ಯಯದ ವ್ಯಾಪ್ತಿಯು ತುಂಬಾ ಹೆಚ್ಚು. ಇದನ್ನು 'ಗಳ್' ಗೆ ಆದೇಶವೆಂದು ಹೇಳುವುದು ಸರಿಯೆ ಎಂಬ ಪ್ರಶ್ನೆ ಮೂಡುತ್ತದೆ. ಅರ್ ಎಂಬುದು 'ಅವರ್' ಎಂಬ ಶಬ್ದದ ಸಂಕ್ಷಿಪ್ತ ರೂಪವಾಗಿರಬೇಕೆಂದು ತೋರುತ್ತದೆ. ಇದು ಪುಲ್ಲಿಂಗ ಸ್ತ್ರೀ ಲಿಂಗಗಳಿಗೆ ಅನ್ವಯವಾಗುತ್ತದೆ. ಸರ್ವಾಜಿಗಳಿಗೆ ಗಳ್/ ಕಳ್ ಪ್ರತ್ಯಯವೇ ಹೆಚ್ಚಾಗಿ ಸೇರುತ್ತದೆ. ಇದರ ವ್ಯಾಪ್ತಿಯನ್ನು ನೋಡಿಯೇ ಕೇಶಿರಾಜನು ಹಾಗೆ ಹೇಳಿರಬಹುದು.

೧೦. ಕನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳು ಏಳು. ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಷಷ್ಠೀ, ಸಪ್ತಮೀ ವಿಭಕ್ತಿಗಳು. ಪಂಚಮೀ ವಿಭಕ್ತಿಯು ಅತ್ತಣಿಂ ಎಂಬುದು. ಇದು ಅಪಾದಾನಕಾರಕ. ಅಂದರೆ ವಿಯೋಗಾರ್ಥದಲ್ಲಿ ಬರುತ್ತದೆ. ಅರ್ಥಸ್ಪಷ್ಟತೆಯೇ ವಿಭಕ್ತಿಗಳ ಉದ್ದೇಶವಾಗಿದೆ. ಮರದತ್ತಣಿಂ ಎಂದೂ ಮರದ ದೆಸೆಯಿಂದ ಎಂದೂ ಪಂಚಮಿಯಲ್ಲಿ ಹೇಳಲಾಗುತ್ತದೆ. ದೆಸೆಯಿಂದ ಎಂದರೆ ದಿಕ್ಕಿನಿಂದ ಎಂದು ಅರ್ಥ. ಅತ್ತಣಿಂ ಎಂದು ಹೇಳಿದರೂ ಅದೇ ಅರ್ಥ. ಆಧುನಿಕರು ಪಂಚಮೀ ವಿಭಕ್ತಿ ಪ್ರತ್ಯಯವು ಬೇಕಾಗಿಲ್ಲವೆಂದೂ, ತೃತೀಯೆಯೇ ಆ ಕೆಲಸವನ್ನು ಮಾಡುತ್ತದೆಂದೂ ಹೇಳುತ್ತಾರೆ. ಸ್ಥೂಲವಾಗಿ ನೋಡಿದರೆ ತೃತೀಯೆಯೇ ಸಾಕು ಎನ್ನಿಸುತ್ತದೆ. ಆದರೆ ಸೂಕ್ಷ್ಮ ಪರಿಶೀಲನೆಗೆ ವ್ಯತ್ಯಾಸ ಕಂಡು ಬರುತ್ತದೆ. ಉಪಕರಣವನ್ನು ಬಳಸುವುದು ತೃತೀಯೆಯಲ್ಲಿ ಕಂಡುಬರುತ್ತದೆ. ಕೋಲಿನಿಂದ [ಹೊಡೆದ] ಕೊಡಲಿಯಿಂದ ಕಡಿದ, ಪೆನ್ನಿನಿಂದ ಬರೆದ ಇತ್ಯಾದಿ.

೧೧. ಕನ್ನಡದಲ್ಲಿ ಸಪ್ತ ವಿಭಕ್ತಿಗಳಿವೆ ಎಂಬುದು ನಿಮಗೆ ತಿಳಿದಿದೆ. ಅರ್ಥಸ್ಪಷ್ಟತೆಗೆ ವಿಭಕ್ತಿಗಳು ಶ್ರಮಿಸುತ್ತವೆ. ಉದ್ದಿಷ್ಟ ಅರ್ಥವು ನಮಗೆ ಮುಖ್ಯವಾಗಿದೆ. ಆದ್ದರಿಂದ ಈ ಅರ್ಥ ಬರಲು ಇಂಥದೇ ಪ್ರತ್ಯಯದ ಪ್ರಯೋಗವಾಗಬೇಕೆಂದು ಗೊತ್ತಾಗುತ್ತದೆ. ಆದರೂ ಕವಿಗಳು ಬದಲಾವಣೆಗಾಗಿ ಸ್ವಾರಸ್ಯಕ್ಕಾಗಿ ಒಂದು ವಿಭಕ್ತಿ ಬರಬೇಕಾದ ಕಡೆ ಇನ್ನೊಂದು ವಿಭಕ್ತಿಯನ್ನು ಪ್ರಯೋಗಿಸುತ್ತಾರೆ. ಅರ್ಥವು ಪೂರ್ತಿ ಕೆಡದಿರುವುದರಿಂದ ವೈಯಾಕರಣರು ಸಹಿಸಿಕೊಂಡಿದ್ದಾರೆ. ಅದರಲ್ಲೂ ಕೇಶಿರಾಜನು ತುಂಬಾ ಉದಾರ ಭಾವನೆ ಹೊಂದಿದ್ದಾನೆ. ಆದ್ದರಿಂದ ಅತನು ಈ ವಿಭಕ್ತಿಗಳೆಲ್ಲವೂ ಪಲ್ಲಟವಾಗುತ್ತವೆ ಎಂದು ಹೇಳಿ ಕವಿಗಳನ್ನು ಕಾಪಾಡುತ್ತಾನೆ. ಪಂಪಕವಿಯು ತೆಂಕನಾಡ ಮರೆಯಲ್ಕನ್ನೇಂ ಮನಂ ಬರ್ಕುಮೇ ಎಂದು ಬರೆಯುವುದನ್ನು ನೋಡಿ. ನಿಜವಾಗಿ ಬರಬೇಕಾದ್ದು ತೆಂಕನಾಡರ ಎಂಬುದು. ಈ ರೀತಿಯ ಪ್ರಯೋಗಗಳು ಕಾವ್ಯಗಳಲ್ಲಿ ಸಿಗುತ್ತವೆ.

೧೨. ನಿಜವಾಗಿ ಜಾತಿ ಎಂದರೆ ಗುಂಪು. ಒಂದು ಗುಂಪನ್ನು ಕುರಿತು ಏಕವಚನ ಬಳಸುವುದು ಜಾತ್ಯೇಕವಚನ ಎನ್ನಿಸಿಕೊಳ್ಳುತ್ತದೆ. ಆನೆಗಳ ಸಮೂಹ, ಕುರಿಗಳ ಮಂದೆ ಇತ್ಯಾದಿಗಳನ್ನು ಕುರಿತು ಹೇಳುವಾಗ ಆನೆ ಬಂದುವು, ಕುರಿ, ದನ ಹೋದುವು ಎನ್ನುತ್ತೇವೆ. ಕ್ರಿಯಾಪದ ಬಹುವಚನದಲ್ಲಿರುತ್ತದೆ. ಅದರಿಂದ ನಾವು ಆನೆಗಳು, ದನಗಳು ಎಂದು ತಿಳಿಯಬಹುದು.

### 2.8.2. ಅಭ್ಯಾಸ ಪ್ರಶ್ನೆಗಳು

೧. ಲೋಪ ಸಂಧಿ ಬಗ್ಗೆ ಬರೆಯಿರಿ.

೨. ಸಂಧಿವಿಕಲ್ಪ ಎಂದರೇನು

೩. ಸಂಸ್ಕೃತದಿಂದ ಕನ್ನಡಕ್ಕೆ ಸ್ವೀಕೃತವಾದ ಶಬ್ದಗಳ ಬಗ್ಗೆ ತಿಳಿಸಿ.

೪. ಸರ್ವನಾಮಗಳ ಬಗ್ಗೆ ಬರೆಯಿರಿ.

## ಸಂಚಿಕೆ - 10

## ವ್ಯಾಕರಣ

# ಘಟಕ - 3

# ಶಬ್ದಮಣಿದರ್ಪಣಂ : ಸಮಾಸ ಪ್ರಕರಣ, ತದ್ಧಿತ ಪ್ರಕರಣ

**ಪರಿವಿಡಿ :**

3.0 ಘಟಕದ ಉದ್ದೇಶ

3.1 ಪೀಠಿಕೆ

3.2 ಸಮಾಸ ಪ್ರಕರಣ

3.2.0 ತತ್ಪುರುಷ ಸಮಾಸ

3.2.1 ಕರ್ಮಧಾರಯ ಸಮಾಸ

3.2.2 ದ್ವಿಗು ಸಮಾಸ

3.2.3 ಅಂಶಿ ಸಮಾಸ (ಅವ್ಯಯೀ ಭಾವ)

3.2.4 ದ್ವಂದ್ವ ಸಮಾಸ

3.2.5 ಬಹುವ್ರೀಹಿ ಸಮಾಸ

3.2.6 ಕ್ರಿಯಾ ಸಮಾಸ

3.2.7 ಗಮಕ ಸಮಾಸ

3.3 ತದ್ಧಿತ ಪ್ರಕರಣ, ಕೃದಂತ ಪ್ರಕರಣ

3.4 ವಿಶೇಷ ವಿಚಾರಗಳು

3.5 ಪರೀಕ್ಷಾ ವಿಷಯಗಳು

3.5.0 ಸ್ವಪರೀಕ್ಷಾ ಪ್ರಶ್ನೆಗಳು

3.5.1 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

3.5.2 ಅಭ್ಯಾಸ ಪ್ರಶ್ನೆಗಳು

## 3.0 ಉದ್ದೇಶ

ಸಮಾಸವೆಂದರೇನೆಂದು ತಿಳಿಯುವುದು, ಸಮಾಸದ ಪ್ರಭೇದಗಳನ್ನು ಅಂದರೆ ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ದ್ವಂದ್ವ, ಅಂಶಿ (ಅವ್ಯಯೀಭಾವ) ಸಮಾಸಗಳ ಸ್ವರೂಪವನ್ನು ವಿವರವಾಗಿ ಅರ್ಥಮಾಡಿಕೊಳ್ಳುವುದು, ಕನ್ನಡಕ್ಕೆ ವಿಶಿಷ್ಟವಾದ ಕ್ರಿಯಾ ಸಮಾಸವನ್ನು ಕುರಿತು ತಿಳಿದುಕೊಳ್ಳುವುದು, ಗಮಕ ಸಮಾಸದ ವೈಶಿಷ್ಟ್ಯವನ್ನು ಅರ್ಥಮಾಡಿಕೊಳ್ಳುವುದು, ಅರಿಸಮಾಸವೆಂದರೆ ಏನು ಎಂಬುದನ್ನು ಸ್ಪಷ್ಟವಾಗಿ ಅರಿಯುವುದು, ತದ್ಧಿತಗಳು ಎಂದರೆ ಏನು, ಅದನ್ನು ಸಾಧಿಸುವುದು ಯಾವರೀತಿ ಎಂಬುದನ್ನು ತಿಳಿಯುವುದು ಮತ್ತು ವಿಶೇಷಾಂಶಗಳನ್ನು ಪ್ರತ್ಯೇಕವಾಗಿ ಚರ್ಚಿಸುವುದು ಈ ಘಟಕದ ಉದ್ದೇಶವಾಗಿದೆ.

## 3.1 ಪೀಠಿಕೆ

ಕೇಶಿರಾಜನ ವ್ಯಾಕರಣ ಗ್ರಂಥವಾದ ಶಬ್ದಮಣಿ ದರ್ಪಣದ ಬಗ್ಗೆ ಮೊದಲ ಪಾಠಗಳನ್ನು ಓದಿದ್ದೀರಿ. ಹದಿಮೂರನೆ ಶತಮಾನದಲ್ಲಿ ಬದುಕಿದ್ದ ಕವಿಯೂ ವೈಯಾಕರಣನೂ ಆದ ಕೇಶಿರಾಜನು ಹಳಗನ್ನಡದ ಬಗ್ಗೆ ವ್ಯಾಕರಣವನ್ನು ಬರೆಯಲು ಇಚ್ಛೆಪಟ್ಟು ಬರೆದಿರುವುದು ಸಾಧಾರಣವಾದ ವಿಷಯವಲ್ಲ. ಎಷ್ಟೊಂದು ಸಾಹಿತ್ಯವನ್ನು ಅವನು ಅಧ್ಯಯನ ಮಾಡಿರಬೇಕು ಊಹಿಸಿ. ಆ ಕಾಲದಲ್ಲಿ ಓಲೆಗರಿಗಳ ಮೇಲೆ ಬರೆದ ಪ್ರತಿಗಳನ್ನು ಕಷ್ಟಪಟ್ಟು ಓದಬೇಕಾಗಿತ್ತು. ಪ್ರತಿಕಾರರು ಮಾಡಿರುವ ತಪ್ಪುಗಳನ್ನು ವಿನಾಯಿಸಿ ಓದಿ ಟಿಪ್ಪಣಿ ಮಾಡಿಕೊಳ್ಳಬೇಕಾಗಿತ್ತು. ಕಷ್ಟಸಾಧ್ಯವಾದ ಕಾರ್ಯವನ್ನು ಮಾಡಿರುವ ಕೇಶಿರಾಜನು ಕನ್ನಡದ ವ್ಯಾಕರಣದಲ್ಲಿ ಸಮಾಸಗಳ ಮಹತ್ವವನ್ನು ಕುರಿತು ಚರ್ಚಿಸಿದ್ದಾನೆ. ನಾವು ಮಾತನಾಡುವಾಗ ಬಳಸುವ ಭಾಷೆಗಿಂತ ಬರಹದ, ಭಾಷಣದ ಭಾಷೆಯು ಉನ್ನತ ಸ್ತರದಲ್ಲಿರುತ್ತದೆ, ಭಾಷಾಶುದ್ಧಿಯಿರುತ್ತದೆ. ಆದರೆ ಮಾತನಾಡುವಾಗಲೂ ಸಮಾಸಗಳಿರುತ್ತವೆ, ಅಲಂಕಾರವೂ ಇರುತ್ತದೆ. ಆದರೆ ಪ್ರಮಾಣದಲ್ಲಿ ಕಡಿಮೆಯಾಗಿರುತ್ತದೆ. ನಾವು ಅರಮನೆಗೆ ಹೋಗಿದ್ದೆವು ಎಂದು ಹೇಳುತ್ತೇವೆ. ಅರಮನೆಯು ಸಮಾಸ ಪದ ಎಂಬುದು ಗಮನಕ್ಕೆ ಬಂದಿರುವುದಿಲ್ಲ. ಅರಸನ+ಮನೆ ಅರಮನೆ ಎಂದಾಗಿರುತ್ತದೆ. ನಾವು ಕಣ್ಣೀರುಸುರಿಸುತ್ತೇವೆ ತಣ್ಣೀರು ಕುಡಿಯುತ್ತೇವೆ. ಕಣ್ಣು ಮತ್ತು ನೀರು ಎಂಬ ಎರಡು ಶಬ್ದಗಳಿರುವುದು ನೆನಪಿಗೆ ಬರುವುದಿಲ್ಲ, ಹಾಗೆಯೇ ತಣ್ಣನೆ ಮತ್ತು ನೀರು ಎಂಬ ಎರಡು ಶಬ್ದಗಳಿರುವುದು ಗಮನಕ್ಕೆ ಬರುವುದಿಲ್ಲ. ಜನರು ಹೆದ್ದೊರೆಯನ್ನು ಹೆಬ್ಬಳ್ಳವನ್ನು ದಾಟುತ್ತಾರೆ. ಹೆದ್ದೊರೆ ಎಂಬುದು ಹಿರಿಯ+ತೊರೆ ಎಂಬುದಾಗಲೀ, ಹೆಬ್ಬಳ್ಳ ಎಂಬುದು ಹಿರಿಯ+ಹಳ್ಳ ಎಂಬುದಾಗಲೀ ಹೊಳೆಯುವುದಿಲ್ಲ. ಮೈಗಳ್ಳ, ಅಂಗೈ, ಮುಂಗಾಲು, ಕಿಬ್ಬೆರಿ, ಮುಂಗಾರು, ಮುಂತಾದುವು ಮಾತಿನಲ್ಲಿ ಬಂದುಹೋಗುತ್ತವೆ. ಆದ್ದರಿಂದ ಸಮಾಸಗಳು ಕೇವಲ ಪುಸ್ತಕದ ಬದನೆಕಾಯಿಯಾಗಿ ಉಳಿಯದೆ ನಿತ್ಯಬಳಕೆಗೂ ಸಲ್ಲುವುದನ್ನು ನೋಡುತ್ತೇವೆ. ಈಗ ಸಮಾಸಗಳ ಸ್ವರೂಪ, ಪ್ರಭೇದಗಳನ್ನು ನೋಡುವುದು ಒಳ್ಳೆಯದು.

## 3.2 ಸಮಾಸ ಪ್ರಕರಣ

ಎರಡು ಅಥವಾ ಅನೇಕ ಪದಗಳು ಅರ್ಥಕ್ಕನುಸಾರವಾಗಿ ಸೇರಿ ಮಧ್ಯದಲ್ಲಿರುವ ವಿಭಕ್ತಿ ಪ್ರತ್ಯಯವನ್ನು ಲೋಪ ಮಾಡಿಕೊಂಡು ಒಂದು ಪದವಾಗುವುದು ಸಮಾಸವೆನ್ನಿಸಿಕೊಳ್ಳುತ್ತದೆ.

ಸಮಾಸದಲ್ಲಿ ಬರುವ ಮೊದಲನೆಯ ಪದವು ಪೂರ್ವಪದ, ಎರಡನೆಯ ಪದವು ಉತ್ತರಪದ, ಫಲಿತಾಂಶವೇ ಸಮಸ್ತ ಪದ. ಈ ಸಮಸ್ತ ಪದವನ್ನು ಬಿಡಿಸಿ ಬರೆಯುವುದಕ್ಕೆ ವಿಗ್ರಹವಾಕ್ಯ ಎಂದು ಹೇಳಲಾಗುತ್ತದೆ. ಸೂತ್ರ 173ರಲ್ಲಿ ಹೀಗೆ ಹೇಳಲಾಗಿದೆ.

ಕಱುತಾಯ ಬೞಿಯನುೞಿಯದ

ತೆಱದಿಂದಂ ನಾಮಪದಮದರ್ಥಾನುಗಮಾ

ಗೆಱಗೆ ಸಮಾಸಂ ನೆಗೞ್ಗುಂ

ನೆಱೆಪೋಕುಂ ಮಧ್ಯಗತ ವಿಭಕ್ತಿಗಳದಱೊಳ್

ಹಸುವಿನ ಕರುವು ತನ್ನ ತಾಯಿಯನ್ನು ಬಿಟ್ಟು ಹೋಗದ ರೀತಿಯಲ್ಲಿ ನಾಮಪದ ಮತ್ತು ಅದರ ಅರ್ಥವಿರುತ್ತದೆ. ನಾಮಪದಗಳು ಪರಸ್ಪರ ಕೂಡುವಲ್ಲಿ ಅವುಗಳ ಅಂತರಾಳದಲ್ಲಿರುವ ವಿಭಕ್ತಿಗಳು ಲೋಪವಾಗುತ್ತವೆ ಎಂದು ತಿಳಿಸುತ್ತಾನೆ. ಪೂರ್ವಪದದ ಅರ್ಥ, ಉತ್ತರಪದ ಅರ್ಥ ಬೇರೆ ಬೇರೆಯಾಗಿದ್ದರೂ ಒಟ್ಟಾಗಿ ಕೂಡುವಾಗ ಮೊದಲ ಪದದ ವಿಭಕ್ತಿಯು ಲೋಪವಾಗಿ ಹೊಸದೊಂದು ಕೂಡಿದ ಅರ್ಥ ಕೊಡುವ ರೂಪ 'ಸಮಾಸ' ಎನ್ನಿಸುತ್ತದೆ.

ಸಂಸ್ಕೃತ -ಸಂಸ್ಕೃತ ಶಬ್ದಗಳೇ ಸೇರಿ ಸಮಾಸವಾಗಬಹುದು ಅಥವಾ ಕನ್ನಡ -ಕನ್ನಡ ಶಬ್ದಗಳು ಸೇರಿ ಸಮಾಸವಾಗಬಹುದು. ತದ್ಭವ-ತದ್ಭವಗಳು ಸೇರಿ ಸಮಾಸವಾಗಬಹುದು. ಅಚ್ಚಗನ್ನಡ ಶಬ್ದ-ತದ್ಭವ ಸೇರಿ ಸಮಾಸವಾಗಬಹುದು.

ಆದರೆ ಕನ್ನಡ-ಸಂಸ್ಕೃತ ಶಬ್ದಗಳನ್ನು ಸೇರಿ ಸಮಾಸ ಮಾಡಬಾರದು. ಆದರೂ ಹಿಂದಿನ ಕವಿಗಳು ಹಾಗೆ ಸೇರಿಸಿ ಸಮಾಸ ಮಾಡಿದ್ದಾರೆ. ಅದನ್ನು ಅರಿಸಮಾಸವೆಂದು ಕರೆದಿದ್ದಾರೆ. ಪೂರ್ವಕವಿಗಳು ಮಾಡಿರುವಲ್ಲಿ ಬಿರುದಾವಳಿಗಳಲ್ಲಿ, ಗಮಕಸಮಾಸದಲ್ಲಿ, ಕ್ರಿಯಾಸಮಾಸದಲ್ಲಿ ಅರಿಸಮಾಸವು ದೋಷವಲ್ಲ. ಸಮಾಸಗಳು ಎಂಟು ಬಗೆಯಾಗಿವೆ. ಅವುಗಳೆಂದರೆ 1.ತತ್ಪುರುಷ 2. ಕರ್ಮಧಾರಯ, 3. ದ್ವಿಗು 4. ಅಂಶಿ(ಅವ್ಯಯೀಭಾವ) 5.ದ್ವಂದ್ವ 6. ಬಹುವ್ರೀಹಿ 7. ಕ್ರಿಯಾ 8. ಗಮಕ.

ಇವುಗಳಲ್ಲಿ ಯಾವುದು ಉತ್ತರ ಪದಾರ್ಥ ಪ್ರಧಾನ, ಯಾವುದು ಪೂರ್ವಪದಾರ್ಥ ಪ್ರಧಾನ ಯಾವುದು ಉಭಯ ಪದಾರ್ಥ ಪ್ರಧಾನ ಯಾವುದು ಅನ್ಯಪದಾರ್ಥಪ್ರಧಾನ ಎಂಬುದನ್ನು ಹೀಗೆ ತೋರಿಸಬಹುದು.



### 3.2.0 ತತ್ಪುರುಷ ಸಮಾಸ

ಎರಡು ಪದಗಳು ಸೇರಿ ಸಮಾಸವಾದಾಗ ಉತ್ತರಪದದ ಅರ್ಥವು ಪ್ರಧಾನವಾಗಿ ಉಳ್ಳ ಸಮಾಸಕ್ಕೆ ತತ್ಪುರುಷ ಸಮಾಸವೆನ್ನುವರು.

ಪೂರ್ವಪದವು ತೃತೀಯಾದಿ ವಿಭಕ್ತಿಗಳಿಂದ ಹಿಡಿದು ಸಪ್ತಮೀ ವಿಭಕ್ತಿಯವರೆಗೆ ಯಾವುದಾದರೂ ವಿಭಕ್ತ್ಯಂತವಾಗಿರಬೇಕು. ಆಗ ಮೊದಲ ಪದದ ವಿಭಕ್ತಿಯಾವುದೋ ಅದರ ಹೆಸರಿನಲ್ಲಿ ಸಮಾಸವನ್ನು ಹೇಳುವುದು ರೂಢಿಯಲ್ಲಿದೆ.

- **ಕನ್ನಡ -ಕನ್ನಡ ಶಬ್ದಗಳು ಸೇರಿರುವುದು :**

ಮರದ + ಕಾಲು = ಮರಗಾಲು (ಷಷ್ಠೀ ತತ್ಪುರುಷ ಸಮಾಸ)

ಮಳೆಯ + ಕಾಲ = ಮಳೆಗಾಲ (ಷಷ್ಠೀ ತತ್ಪುರುಷ ಸಮಾಸ)

ಬೆಟ್ಟದ + ತಾವರೆ = ಬೆಟ್ಟದಾವರೆ (ಷಷ್ಠೀ ತತ್ಪುರುಷ ಸಮಾಸ)

ಕಲ್ಲಿನ + ಹಾಸಿಗೆ = ಕಲ್ಲುಹಾಸಿಗೆ (ಷಷ್ಠೀ ತತ್ಪುರುಷ ಸಮಾಸ)

ತಲೆಯಲ್ಲಿ +ನೋವು = ತಲೆನೋವು (ಸಪ್ತಮಿ ತತ್ಪುರುಷ ಸಮಾಸ)

ಹಗಲಿನಲ್ಲಿ + ಕನಸು = ಹಗಲುಕನಸು (ಸಪ್ತಮಿ ತತ್ಪುರುಷ ಸಮಾಸ)

ತೇರಿಗೆ + ಮರ =ತೇರುಮರ (ಚತುರ್ಥಿ ತತ್ಪುರುಷ ಸಮಾಸ)

ಕಣ್ಣಿನಿಂದ + ಕುರುಡ = ಕಣ್ಕುರುಡ (ತೃತೀಯಾ ತತ್ಪುರುಷ ಸಮಾಸ)

- **ಸಂಸ್ಕೃತ -ಸಂಸ್ಕೃತ ಶಬ್ದಗಳು ಸೇರಿರುವುದು :**

ಕವಿಗಳಿಂದ + ವಂದಿತ = ಕವಿವಂದಿತ (ತೃತೀಯಾ ತತ್ಪುರುಷ ಸಮಾಸ)

ವ್ಯಾಘ್ರದ ದೆಸೆಯಿಂದ + ಭಯ= ವ್ಯಾಘ್ರಭಯ (ಪಂಚಮೀ ತತ್ಪುರುಷ)

ಉತ್ತಮರಲ್ಲಿ + ಉತ್ತಮ = ಉತ್ತಮೋತ್ತಮ (ಸಪ್ತಮೀ ತತ್ಪುರುಷ)

ದೇವರ + ಮಂದಿರ = ದೇವಮಂದಿರ (ಷಷ್ಠೀ ತತ್ಪುರುಷ)

ಮೇಲಿನ ಉದಾಹರಣೆಗಳಲ್ಲಿ ಮಳೆಗಾಲ, ಬೆಟ್ಟದಾವರೆ ಮುಂತಾದುವನ್ನು ಗಮನಿಸಿ. ಕಾಲ > ಗಾಲ, ತಾವರೆ > ದಾವರೆ ಆಗಿದೆ, ಅಂದರೆ ಉತ್ತರ ಪದದ ಆದಿಯಲ್ಲಿ ಕತಪಗಳಿದ್ದರೆ ಕ್ರಮವಾಗಿ ಗದಬ ಗಳು ಆದೇಶವಾಗಿ ಬರುವುದನ್ನು ನೋಡಬಹುದು.

ಈ ಸಮಾಸಕ್ಕೆ ಸಂಬಂಧಿಸಿದಂತೆ ಇನ್ನು ಕೆಲವು ಅಂಶಗಳನ್ನು ನೋಡೋಣ. ಇದರಲ್ಲಿ ಪೂರ್ವಪದದ ಕಡೆಯ ಅಕ್ಷರಕ್ಕೆ ಲೋಪವಾಗಬಹುದು ಅಥವಾ ಒಂದು ಅಕ್ಷರದ ಆಗಮವಾಗಬಹುದು ಅಥವಾ ಒಂದು ಪ್ರಕೃತಿಗೆ ಬದಲಾಗಿ ಮತ್ತೊಂದು ಪ್ರಕೃತಿಯ ಆದೇಶವೂ ಆಗಬಹುದು.(ಸೂತ್ರ 187)

೧. ಒಳಗು +ಕೋಂಟೆ = (ಒಳಗಣ +ಕೋಂಟೆ) =ಒಳಕೋಂಟೆ
ಪೊಱಗು +ಬೇಲಿ = (ಪೊಱಗಣ + ಬೇಲಿ) = ಪೊಱವೇಲಿ

ಇವುಗಳನ್ನು ಗಮನಿಸಿದರೆ ಇವುಗಳೂ ಕೂಡ ಷಷ್ಠೀತತ್ಪುರುಷ ಸಮಾಸಗಳೇ ಆಗಿರುವುದು ತಿಳಿಯುತ್ತದೆ. ಕೆಲವರು ಹೇಳುವಂತೆ ಇಲ್ಲಿ ಒಳಗು, ಒಳಗಣ ಇತ್ಯಾದಿಗಳ ಅಗತ್ಯವೇ ಇಲ್ಲ. ಒಳ, ಪೊಱ ಎಂಬುವೇ ಪ್ರಕೃತಿಗಳಾಗಿರಬಹುದೆಂದು ಹೇಳುತ್ತಾರೆ.

೩. ಒಂದು ವರ್ಣ ಲೋಪವಾಗಿ ಇನ್ನೊಂದು ವರ್ಣದ ಆಗಮಕ್ಕೆ:

ಹಾವು + ಕಾಯ್ (ಹಾವಿನಕಾಯ್) ಹಾಂಗಾಯ್ (ಷಷ್ಠೀತತ್ಪುರುಷ)

ಆವು + ಕೊಳಗು (ಆವಿನ ಕೊಳಗು) ಆಂಗೊಳಗು (ಷಷ್ಠೀತತ್ಪುರುಷ)

ಪಚ್ಚನೆ + ತಳಿರ್ = ಪಂದಳಿರ್: ಬೆಚ್ಚನೆ + ಕದಿರ್ = ಬೆಂಗದಿರ್ / ಬಿಸುಗದಿರ್

ಹಾವು, ಆವುಗಳಲ್ಲಿ ವು ಕಾರ ಲೋಪವಾಗಿದೆ ಮತ್ತು ಅನುಸ್ವಾರ ಆಗಮವಾಗಿದೆ, ಯ,ವ,ಲ,ಗಳು ಅನುನಾಸಿಕವೂ ಆಗುತ್ತವೆಂದು ಕೇಶಿರಾಜನೇ ಹೇಳಿರುವುದರಿಂದ 'ವ' ಮತ್ತು 'ಂ' ಗಳು ಹತ್ತಿರದ ಸಂಬಂಧಿಗಳೇ ಆಗುತ್ತವೆ.

೩. ಯಾವ ವರ್ಣದ ಲೋಪವೂ ಇಲ್ಲದೆ ಉಚಿತ ವರ್ಣಾಗಮಕ್ಕೆ:

ನಟ್ + ಕೊಂಬು (ನಡುವಣ+ಕೊಂಬು) = ನಟ್ಟೆಕೊಂಬು

ನಟ್ + ಮನೆ (ನಡುವಣ+ಮನೆ) = ನಟ್ಟೆಮನೆ

ಟ್ ಎಂಬ ವರ್ಣದ ಮುಂದೆ 'ಎ' ಎಂಬ ಸ್ವರ ಆಗಮವಾಗಿರುವುದರಿಂದ ಟಕಾರ ದ್ವಿತ್ವವಾಗಿದೆ ಎಂದು ತಿಳಿಯಬೇಕು.

೪. ಆದೇಶವಾಗುವುದಕ್ಕೆ

ಕಳಗು + ಕೊಂಬು (ಕಳಗಣ + ಕೊಂಬು) = ಕಿಟ್ಕೊಂಬು

ಕಳಗು +ನೆಲ ( ಕಳಗಣ +ನೆಲಂ) = ಕಿನ್ನೆಲಂ

ಇಲ್ಲಿ ಕಳಗು ಎಂಬುದಕ್ಕೆ ಕಿಟ್ ಮತ್ತು ಕಿನ್ ಎಂಬ ಎರಡು ಬಗೆಯ ಆದೇಶವನ್ನು ಕಾಣುತ್ತೇವೆ.

### 3.2.1 ಕರ್ಮಧಾರಯ ಸಮಾಸ

ಕರ್ಮಧಾರಯ ಸಮಾಸವು ತತ್ಪುರುಷದ ಒಂದು ಪ್ರಭೇದವಾಗಿದೆ. ಪೂರ್ವಪದವು ಉಕಾರ ಅಥವಾ ಇಕಾರದಿಂದ ಕೂಡಿದ ಕೃದಂತವಾಗಿದ್ದು ಉತ್ತರಪದದ ಆದಿಯಲ್ಲಿ ಗದಬಜ ಕಾರಗಳಿದ್ದರೆ ಮಧ್ಯೆ ಬಿಂದು ಬರುತ್ತದೆ.

ಎತ್ತುವ + ಕೋಲ್ = ಎತ್ತುಂಗೋಲ್: ತೂಗುವ + ತೊಟ್ಟಿಲ್ = ತೂಗುಂದೊಟ್ಟಿಲ್

ಆಡುವ + ತೊಲೆ =ಆಡುಂದೊಲೆ, ಇಟಿವ + ಪೋಟ್ಟು = ಇಟಿಯುಂಬೊಟ್ಟು

ಇಲ್ಲಿ ಮಧ್ಯಪ್ರವೇಶ ಮಾಡುವ ಬಿಂದುವು ಸೌಲಭ್ಯಕ್ಕಾಗಿ ಬಂದಿದೆಯೆಂದು ತಿಳಿಯಬೇಕಾಗುತ್ತದೆ. ಆದರೆ ಸೂತ್ರ 182ರಲ್ಲಿ ಬಿಂದುವಿಲ್ಲದ ಸಮಾಸ ಕಂಡುಬರುತ್ತದೆ. ಉದಾ. ಸುಡುವ + ಕಾಡು = ಸುಡುಗಾಡು, ಉಡುವ+ಕೊಜೆ =ಉಡುಗೊಜೆ, ಇಡುವ+ಕಿಚ್ಚು =ಇಡುಗಿಚ್ಚು ಇತ್ಯಾದಿ.

ತತ್ಪುರುಷ ಸಮಾಸವು ಏಕಾಶ್ರಯವಾಗಿದ್ದರೆ ಅದೇ ಕರ್ಮಧಾರಯವಾಗುತ್ತದೆಂದು ಹೇಳಲಾಗಿದೆ. ಉತ್ತರ ಪದದ ಅರ್ಥವೇ ಪ್ರಧಾನ. ಏಕಾಶ್ರಯ ಎಂದರೆ ಪೂರ್ವಪದ ಉತ್ತರಪದಗಳು ಒಂದೇ ವಿಭಕ್ತಿಯಲ್ಲಿರಬೇಕು.

ತೆಳ್ಪಿತು+ಕದಂಪು = ತೆಳ್ಗದಂಪು: ಬಳ್ಪಿತು+ಕನ್ನಡ=ಬಳ್ಗನ್ನಡ: ಬಲ್ಲಿತು+ಮುಗುಳ್ =ಬಲ್ಮುಗುಳ್: ಪಿರಿದು+ಆನೆ= ಪೇರಾನೆ: ಪೆಣ್+ಉಡೆ = ಪೆಣ್ಣುಡೆ.

ತೆಳ್ಪಿತು, ಬಳ್ಪಿತು ಇವುಗಳು ಗುಣವಾಚಕಗಳು, ಪ್ರಥಮಾ ವಿಭಕ್ತಿಯಲ್ಲಿವೆ. ಪ್ರಧಾನ ಅರ್ಥವಾದ ಕದಂಪು, ಕನ್ನಡ ಇವುಗಳೂ ಕೂಡ ಪ್ರಥಮಾ ವಿಭಕ್ತಿಯಲ್ಲಿವೆ. ಸಮಾಸವಾಗುವಾಗ ಪೂರ್ವಪದಾಂತ್ಯವು

ಲೋಪವಾಗುತ್ತದೆಂಬುದು ಸಾಮಾನ್ಯವಾದ ವಿಷಯವಾಗಿದೆ. ಕರ್ಮಧಾರಯದಲ್ಲೂ ಅದು ನಿಜ. ಬಡವು+ನಡು=ಬಡನಡು: ಅರಸು+ನೇಱಿಲ್= ಅರನೇಱಿಲ್.... ಮೇಲಿನ ಉದಾಹರಣೆಗಳನ್ನು ಗಮನಿಸಿದರೆ ಒಂದು ಸಾಮಾನ್ಯ ಅಂಶ ಕಂಡುಬರುತ್ತದೆ. ಅದೇಂದರೆ ಒಂದು ಪದ 'ವಿಶೇಷಣ'ವಾಗಿದ್ದು ಇನ್ನೊಂದು ಪದ 'ವಿಶೇಷ್ಯ'ವಾಗಿದೆ. ವಿಶೇಷಣವನ್ನು ಗುಣವಾಚಕವೆಂದರೂ ತಪ್ಪಲ್ಲ. ಕರ್ಮಧಾರಯವನ್ನು 'ಪೂರ್ವಪದ ಉತ್ತರಪದಗಳು ವಚನ, ವಿಭಕ್ತಿಗಳಲ್ಲಿ ಸಮಾನವಾಗಿದ್ದು ವಿಶೇಷಣ-ವಿಶೇಷ್ಯ ಸಂಬಂಧದಿಂದ ಕೂಡಿ, ಆಗುವ ಸಮಾಸ' ಎಂದು ಕರೆಯಬಹುದು. ಉತ್ತರಪದವೇ ಇಲ್ಲಿ ಪ್ರಧಾನ.

- ಕನ್ನಡ-ಕನ್ನಡ ಪದಗಳ ಸೇರುವಿಕೆ:

  ಹಿರಿದು + ಜೇನು= ಹೆಜ್ಜೇನು: ಚಿಕ್ಕದು+ಮಗು= ಚಿಕ್ಕಮಗು: ಮೆಲ್ಲಿತು + ನುಡಿ= ಮೆಲ್ನುಡಿ

- ಸಂಸ್ಕೃತ - ಸಂಸ್ಕೃತ ಪದಗಳ ಸೇರುವಿಕೆ:

  ನೀಲವಾದ + ಉತ್ಪಲ +ನೀಲೋತ್ಪಲ: ಶ್ವೇತವಾದ+ಛತ್ರ=ಶ್ವೇತಛತ್ರ

  ಪೀತವಾದ + ಅಂಬರ = ಪೀತಾಂಬರ ................

  ಕರ್ಮಧಾರಯವನ್ನು 'ವಿಶೇಷಣ ಪೂರ್ವಪದ ಕರ್ಮಧಾರಯ' ಎಂದೂ ಕರೆಯುತ್ತಾರೆ.

### 3.2.2 ದ್ವಿಗು ಸಮಾಸ

ಪೂರ್ವಪದವು ಸಂಖ್ಯಾವಾಚಕವಾಗಿದ್ದು ಉತ್ತರದಲ್ಲಿರುವ ನಾಮಪದದೊಡನೆ ಸೇರಿ ಆಗುವ ಸಮಾಸವೇ ದ್ವಿಗು ಸಮಾಸ. ಕೆಲವರು ಇದನ್ನೂ ಕೂಡ ತತ್ಪುರುಷ ಸಮಾಸದ ಒಂದು ಪ್ರಭೇದ ಎನ್ನುತ್ತಾರೆ. ಇಲ್ಲಿಯೂ ಉತ್ತರಪದದ ಅರ್ಥವೇ ಪ್ರಧಾನವಾಗಿದ್ದರೂ ಪೂರ್ವಪದ ಸಂಖ್ಯಾ ವಾಚಕವಾಗಿರುತ್ತದೆ.

- ಕನ್ನಡ-ಕನ್ನಡ ಶಬ್ದಗಳು ಸೇರಿ ಆಗುವುದಕ್ಕೆ -
  ಎರಡು +ಮಡಿ =ಇಮ್ಮಡಿ: ಮೂರು+ಮಡಿ =ಮುಮ್ಮಡಿ:
  ಎರಡು+ಬಾಳ್ = ಇರ್ಬಾಳ್: ಎರಡು +ಮಾತು = ಎರಲ್ಮಾತು:
  ಮೂರು+ಗಾವುದು = ಮೂಗಾವುದು

- ಸಂಸ್ಕೃತ -ಸಂಸ್ಕೃತ ಶಬ್ದಗಳು ಸೇರಿ ಆಗುವುದಕ್ಕೆ -
  ಪಂಚ +ಇಂದ್ರಿಯ =ಪಂಚೇಂದ್ರಿಯ: ಸಪ್ತ+ಅಂಗಗಳು =ಸಪ್ತಾಂಗಗಳು
  ತ್ರಿ+ನೇತ್ರಗಳು = ತ್ರಿನೇತ್ರಗಳು: ಏಕ+ಅಂಗ = ಏಕಾಂಗ

### 3.2.3 ಅಂಶಿ ಸಮಾಸ (ಅವ್ಯಯೀಭಾವ)

ಪೂರ್ವೋತ್ತರ ಪದಗಳು ಅಂಶ-ಅಂಶಿ ಸಂಬಂಧದಿಂದ ಸೇರಿ, ಪೂರ್ವಪದದ ಅರ್ಥವು ಪ್ರಧಾನವಾಗಿ ಉಳ್ಳ ಸಮಾಸಕ್ಕೆ ಅಂಶಿ ಸಮಾಸವೆನ್ನುತ್ತಾರೆ. ಕೈಯ+ಅಡಿ = ಅಂಗೈ. ಇಲ್ಲಿ ಕೈ ಎಂಬುದು ಪೂರ್ವಪದ, ಹಿಂದಿನಿಂದ ವಿಗ್ರಹವಾಕ್ಯವನ್ನು ಹೀಗೇ ಬರೆಯುತ್ತಾ ಬಂದಿದ್ದಾರೆ. ಇದನ್ನು ಅಡಿ +ಕೈ = ಅಂಗೈ ಎಂದೂ ಹೇಳಬಹುದು. ಆಗ ಉತ್ತರ ಪದ ಪ್ರಧಾನ ಎಂದು ಹೇಳಬೇಕಾಗುತ್ತದೆ. ಸಾಮಾನ್ಯವಾಗಿ ಪೂರ್ವಪದ ಪ್ರಧಾನ ಎಂದು ಹೇಳುವುದರಿಂದ ಕೈಯ+ಅಡಿ ಎಂಬುದೇ ಬಳಕೆಯಲ್ಲಿದೆ.

ಕೈಯ+ಅಡಿ ಎಂಬಲ್ಲಿ ಡ ಕಾರಕ್ಕೆ ಅನುಸ್ವಾರದ ಆದೇಶವೂ
ಕ ಕಾರಕ್ಕೆ ಗ ಕಾರಾದೇಶವೂ ಆಗಿದೆ ಎಂದು ಹೇಳುವಾಗ ಪುನಃ
ಅಡಿ +ಕೈ ಎಂದು ಏಕೆ ಹೇಳಬಾರದು ಎಂಬ ಪ್ರಶ್ನೆ ಮೂಡುತ್ತದೆ.

- ಕನ್ನಡ -ಕನ್ನಡ ಶಬ್ದಗಳು ಸೇರಿ ಆದುದಕ್ಕೆ :

  ಕಾಲ+ಅಡಿ= ಅಂಗಾಲು: ಕಾಲ +ಮುಂದು = ಮುಂಗಾಲು

  ಕೈಯ +ಮೇಲು= ಮೇಂಗೈ : ಪಗಲಿನ +ಮುಂದು = ಮುಂಬಗಲ್

  ಇಲ್ಲ+ ಪಿಂತು = ಪಿಂತಿಲ್: ತಲೆಯ+ಹಿಂದು = ಹಿಂದಲೆ

  ಹುಬ್ಬಿನ +ಕುಡಿ = ಕುಡಿಹುಬ್ಬು; ತುಟಿಯ+ಕೆಳಗು =ಕೆಳತುಟಿ.

- ಸಂಸ್ಕೃತ -ಸಂಸ್ಕೃತ ಶಬ್ದಗಳು ಸೇರಿ ಆಗುವುದಕ್ಕೆ :

  ಯಥಾಕಾಲ, ಯಥಾರ್ಥ, ನಿರ್ನಿಮಿತ್ತ ..... ಮುಂತಾದುವನ್ನು ಹೇಳಲಾಗುತ್ತದೆ.

### 3.2.4 ದ್ವಂದ್ವ ಸಮಾಸ

ಕೇಶಿರಾಜನು ಸೂತ್ರ 176 ರಲ್ಲಿ 'ಪದಾರ್ಥದ ಗಡಣಂ ದ್ವಂದ್ವಮೆನಿಪ್ಪುದು' ಎಂದು ಹೇಳಿದ್ದಾನೆ. ಉದಾಹರಣೆಯಾಗಿ 'ಆಟಪಾಟಕೂಟಂಗಳ್, ಮರಗಿಡುಬಳ್ಳಿಪುಲ್ಲೊದಱುಪಕ್ಕಿಮಿಗಂಗಳ್' ಎಂದು ಕೊಟ್ಟಿದ್ದಾನೆ. 'ಎರಡು ಅಥವಾ ಅನೇಕ ನಾಮಪದಗಳು ಸಹಯೋಗ ತೋರುವಂತೆ ಸೇರಿಕೊಂಡು ಎಲ್ಲ ಪದಗಳ ಅರ್ಥಗಳೂ ಪ್ರಧಾನವಾಗಿ ಉಳ್ಳ ಸಮಾಸಕ್ಕೆ ದ್ವಂದ್ವ ಸಮಾಸವೆಂದು ಹೆಸರು.

- ಕನ್ನಡ ಶಬ್ದಗಳು ಸೇರಿ ಸಮಾಸವಾಗುವುದಕ್ಕೆ -

  ಕೆರೆಯೂ +ಕಟ್ಟೆಯೂ +ಬಾವಿಯೂ =ಕೆರೆಕಟ್ಟೆಬಾವಿ

  ಗಿಡಮರಬಳ್ಳಿ, ಆನೆಕುದುರೆಒಂಟೆ, ಗುಡುಗುಸಿಡಿಲುಮಿಂಚು....

ಸಮಸ್ತಪದವನ್ನು ಏಕವಚನಾಂತವಾಗಿ ಮತ್ತು ಬಹುವಚನಾಂತವಾಗಿ ಎರಡೂ ರೀತಿ ಬರೆಯಬಹುದು.

ಏಕವಚನಾಂತವಾಗಿ ಬರೆದರೆ 'ಸಮೂಹಾರದ್ವಂದ್ವ ಸಮಾಸ' ಎಂದೂ, ಬಹುವಚನಾಂತವಾಗಿ ಬರೆದರೆ 'ಇತರೇತರಯೋಗ ದ್ವಂದ್ವ' ಎಂದೂ ಹೇಳುತ್ತಾರೆ.

- ಗಿರಿವನದುರ್ಗ, ಸೂರ್ಯಚಂದ್ರನಕ್ಷತ್ರ, ಕರಿತುರಗರಥಪದಾತಿ, ಇತ್ಯಾದಿಗಳನ್ನು ಸಂಸ್ಕೃತ-ಸಂಸ್ಕೃತ ಶಬ್ದಗಳ ಸೇರುವಿಕೆಗೆ ಉದಾಹರಣೆಗಳೆನ್ನಬಹುದು.

### 3.2.5 ಬಹುವ್ರೀಹಿ ಸಮಾಸ

ಇತರೇತರ ಕ್ರಿಯಾಸಂ

ಹತಮದುತಾನಾವುದಲ್ಲಿ ಮತ್ತೆ ಬಹುವ್ರೀಹಿ

ತಗುಳ್ಗು ಮಾತ್ರವಿಧಿ ಸಂ

ಗತಮಾದಿಪದಾಂತ್ಯದಲ್ಲಿ ಚರಮಕ್ಕಿತ್ವಂ

ಎರಡು ಅಥವಾ ಅನೇಕ ನಾಮಪದಗಳು ಸೇರಿ ಸಮಾಸವಾದಾಗ ಬೇರೊಂದು ಪದದ (ಅನ್ಯಪದ) ಅರ್ಥವೇ ಪ್ರಧಾನವಾಗಿ ಉಳ್ಳಸಮಾಸಕ್ಕೆ ಬಹುವ್ರೀಹಿ ಸಮಾಸವೆನ್ನುವರು.

ಹಣೆಗಣ್ಣ, ಮುಕ್ಕಣ್ಣ, ನಿಡುಮೂಗ ಮುಂತಾದ ಶಬ್ದಗಳನ್ನು ನೋಡಿ. ಹಣೆಯಲ್ಲಿ+ಕಣ್ಣು ಉಳ್ಳವ, ಮೂರು+ಕಣ್ಣು ಉಳ್ಳವ, ನಿಡಿದು+ಮೂಗು ಉಳ್ಳವ ಎಂಬ ಅರ್ಥವಿದಿತವಾಗುತ್ತದೆ. ಮೂರು ಕಣ್ಣು ಉಳ್ಳವನು ಯಾರೋ ಅವನು - ಶಿವ: ಮೂರು ಮತ್ತು ಕಣ್ಣು ಎಂಬ ಶಬ್ದಗಳು ಮುಖ್ಯವಾಗದೆ ಶಿವ ಎಂಬ ಅನ್ಯಪದವೇ ಮುಖ್ಯವಾಗುತ್ತದೆ.

- ಕನ್ನಡ-ಕನ್ನಡ ಪದಗಳು ಸೇರಿ ಆದ ಸಮಾಸಕ್ಕೆ :

  ಮೂರು+ಕಣ್ಣು ಉಳ್ಳವ = ಮುಕ್ಕಣ್ಣ (ಮೂರು ಎಂಬುದಕ್ಕೆ ಮುಕ್ ಆದೇಶವಾಗಿದೆ)

  ನಾಲ್ಕು +ಮೊಗ ಉಳ್ಳವ = ನಾಲ್ಮೊಗ(ನಾಲ್ಕು ಎಂಬುದಕ್ಕೆ ನಾಲ್ ಆದೇಶ)

  ಡೊಂಕು+ಕಾಲು ಉಳ್ಳವ = ಡೊಂಕುಗಾಲ.

ಇವುಗಳಲ್ಲಿ ಪೂರ್ವ ಮತ್ತು ಉತ್ತರ ಪದಗಳು ಒಂದೇ ರೀತಿಯ ವಿಭಕ್ತಿಯಿಂದ ಕೂಡಿವೆ. ಇಂತಹ ಸಮಾಸವನ್ನು 'ಸಮಾನಾಧಿಕರಣ ಬಹುವ್ರೀಹಿ' ಎನ್ನುತ್ತಾರೆ. ಬೇರೆ ಬೇರೆ ವಿಭಕ್ತಿಗಳಿಂದ ಕೂಡಿದ್ದರೆ 'ವ್ಯಧಿಕರಣ ಬಹುವ್ರೀಹಿ' ಎನ್ನುತ್ತಾರೆ.

ಹಣೆಯಲ್ಲಿ +ಕಣ್ಣು ಉಳ್ಳವ = ಹಣೆಗಣ್ಣ ⎤ — ವ್ಯಧಿಕರಣ
ಕಣ್ಣಿನಲ್ಲಿ +ಕಿಚ್ಚು ಯಾರಿಗೋ ಅವನು = ಕಿಚ್ಚುಗಣ್ಣ ⎦

ಕೊಂಕಿದುದು +ಬಿಲ್ ಯಾರಿಗೋ ಅವನು = ಕೊಂಕುವಿಲ್ಲ ⎤ — ಸಮಾನಾಧಿಕರಣ
ಅಲರ್ಗಳ್+ಕಣೆಗಳ್ ಯಾರಬಳಿ ಇವೆಯೋ ಅವನು =ಅಲರ್ಗಣೆಯ ⎦

- ಸಂಸ್ಕೃತ -ಸಂಸ್ಕೃತ ಸೇರಿ ಆದುದು :

  ಚಕ್ರವು +ಪಾಣಿಯಲ್ಲಿ ಯಾರಿಗೋ ಅವನು = ಚಕ್ರಪಾಣಿ (ವ್ಯಧಿಕರಣ)

  ಫಾಲದಲ್ಲಿ +ನೇತ್ರವನ್ನು ಉಳ್ಳವನು = ಫಾಲನೇತ್ರ (ವ್ಯಧಿಕರಣ)

'ಬಹುವ್ರೀಹಿಯ ಕಡೆಯೊಳ್ ಅಕಾರಮುಂ, ಇಕಾರಮುಂ ಅಕ್ಕುಂ. ಪರದೊಳ್ 'ಇಲ್ಲ' ಶಬ್ದಮಿರೆ ಕಡೆಯ ಅಕ್ಷರಕ್ಕೆ 'ಲಿ' ಕಾರಂ ಅಕ್ಕುಂ. ಕೊಲ್ ಶಬ್ದಂ ಪರದೊಳಿರೆ ಕುಲಿ ಎಂಬ ಆದೇಶಮಕ್ಕುಂ'

೧. ಅಕಾರಕ್ಕೆ: ಅಲರ್ಗಣ್ಣಂ, ಕುಡುವಿಲ್ಲಂ, ಬಲ್ಲಲೆಯಂ, ಜಗಲ್ಪರದಂ.....

೨. ಇಕಾರಕ್ಕೆ : ಕಡುಗೆಲಸಿ, ನಿಡುಮೂಗಿ, ಕಡುಚಾಗಿ, ಚಲವಾದಿ.................

೩. ಲಿ ಕಾರಕ್ಕೆ : ಪಲ್ಲಿಲಿವಾಯ್, ಅಗಿಲಿಲಿಗಂಧಂ, ನಾಣಿಲಿಪೆಣ್......

   ಪಲ್ + ಇಲ್ಲದ+ಬಾಯ್: ಅಗಿಲ್+ಇಲ್ಲದ+ಗಂಧಂ; ನಾಣ್+ಇಲ್ಲದ+ಪೆಣ್

೪. ಕುಲಿ ಆದೇಶಕ್ಕೆ : ಮೀನ್ +ಕೊಲ್ಲುವವನು = ಮೀಂಗುಲಿ

   (ಧರ್ಮ)ಅಱ +ಕೊಲ್ಲುವವನು + ಅಱಗುಲಿ

### 3.2.6 ಕ್ರಿಯಾ ಸಮಾಸ

'ಮೊದಲೊಳ್ ಕಾರಕಮುಂ, ಪರದೊಳ್ ಕ್ರಿಯೆಯುಂ ಅರ್ಥವ್ಯಕ್ತಿಯಿಂ ಕೂಡೆ ಕ್ರಿಯಾ ಸಮಾಸಂ. ಸಂಸ್ಕೃತದ ಅಕಾರಾಂತಕ್ಕೆ ಬಿಂದು ನಿತ್ಯಂ ಕನ್ನಡದ ಅದಂತಕ್ಕಂ, ಉದಂತಕ್ಕಂ ಬಿಂದು ವಿಕಲ್ಪಂ'

ಬಳೆ (ಕಾರಕ) +ತೊಟ್ಟಂ(ಕ್ರಿಯೆ) = ಬಳೆದೊಟ್ಟಂ. ಅದೇ ರೀತಿಯಲ್ಲಿ ಕಳೆಗೊಂಡಂ, ತಲೆದೆತ್ತಂ, ಮಠ+ಪೊಕ್ಕಂ =ಮಠವೊಕ್ಕಂ.

ಸಂಸ್ಕೃತವಲ್ಲಿ ಬಿಂದು ಕಡ್ಡಾಯ: ಗುಣಂ +ಕೊಂಡಂ= ಗುಣಂಗೊಂಡಂ

ರಂಗಂಬೊಕ್ಕಂ, ಧನಂಬಡೆದಂ........................

ಕನ್ನಡವಲ್ಲಿ ಬಿಂದು ಕಡ್ಡಾಯವಲ್ಲ:

ಮೊಗಂನೋಡಿದಂ /ಮೊಗನೋಡಿದಂ; ಪದಂಗೊಂಡಂ/ಪದಗೊಂಡಂ

ಅಸುಂಗೊಂಡಂ/ ಅಸುಗೊಂಡಂ: ಮಾತುಂಗುಟ್ಟಿದಂ/ ಮಾತುಗುಟ್ಟಿದಂ.

ಪೂರ್ವಪದವು ಪ್ರಾಯಶಃ ದ್ವಿತೀಯಾ ವಿಭಕ್ತಿಯನ್ನು ಹೊಂದಿದ್ದು ಉತ್ತರಪದದಲ್ಲಿರುವ ಕ್ರಿಯೆಯೊಡನೆ ಸೇರಿ ಆಗುವ ಸಮಾಸವನ್ನು ಕ್ರಿಯಾಸಮಾಸವೆನ್ನುತ್ತಾರೆ.

ಇದರ ಪ್ರಕಾರ ಪೂರ್ವಪದದಲ್ಲಿ ದ್ವಿತೀಯೆ ಇರಬೇಕಾಗುತ್ತದೆ. ಪ್ರಾಯಶಃ ಎಂದು ಹೇಳಿರುವುದರಿಂದ ಬೇರೆ ವಿಭಕ್ತಿಗಳೂ ಬರುವ ಸಂಭಾವ್ಯತೆ ಇರುತ್ತದೆ. ಅದು ಬಹಳ ವಿರಳವೆನ್ನಬಹುದು.

ಉದಾ. ಬಳೆಯನ್ನು +ತೊಟ್ಟಂ = ಬಳೆದೊಟ್ಟಂ.

ಅಸುವನ್ನು +ಕೊಂಡಂ = ಅಸುಗೊಂಡಂ

ಭೇರಿನ್ನಿಂದ +ಬೆರಸಿ = ಬೇರ್ವೆರಸಿ (ತೃತೀಯ ಬಂದಿದೆ)

### 3.2.7 ಗಮಕ ಸಮಾಸ

ಜನಿಯಿಸುಗುಂ ಸಂಖ್ಯಾಸ
ರ್ವನಾಮಗುಣವಚನ ಕೃತ್ಪೂರ್ವಂ ಗಮಕಂ
ತನಗತ್ತಂ ಪೆಱಗಿತ್ತಂ
ತನಗರಿಪದನಿಲ್ಲ ಕರ್ಮಧಾರಯಮದುವುಂ.

ಪೂರ್ವಪದದಲ್ಲಿ ಸಂಖ್ಯೆ ಸರ್ವನಾಮ ಗುಣವಚನ ಕೃದಂತಗಳಲ್ಲಿ ಯಾವುದಾದರೂ ಒಂದು ಇದ್ದು ಉತ್ತರಪದದಲ್ಲಿ ಕಾರಕವಿದ್ದರೆ (ನಾಮಪದ) ಗಮಕ ಸಮಾಸವಾಗುತ್ತದೆ. ಗುಣವಚನವಿದ್ದಾಗ ಅಂತ್ಯದಲ್ಲಿ ಅಕಾರವೂ ಅದರ ಹಿಂದಕ್ಕೆ ಇಕಾರವೂ ಇರುತ್ತದೆ. ಗಮಕ ಸಮಾಸಕ್ಕೆ ಅರಿಸಮಾಸ ದೋಷವಿಲ್ಲ. ಇದನ್ನು ಕರ್ಮಧಾರಯದ ಒಂದು ಭೇದವೆಂದೂ ಹೇಳುತ್ತಾರೆ. 'ಉಂ' ಎಂಬ ಸಮುಚ್ಚಯದಿಂದ ತತ್ಪುರುಷವೂ ಆಗುತ್ತದೆ.

- ಸಂಖ್ಯೆಗೆ :

ಇರ್ಪತ್ತು + ಐದು + ಇರ್ಪತ್ತೈದು (ದ್ವಿಗುವಿನಲ್ಲಿ ಪೂರ್ವಪದ ಮಾತ್ರ ಸಂಖ್ಯಾವಾಚಕವಾಗಿರುತ್ತದೆ) ಇಲ್ಲಿನ ಉತ್ತರಪದವು ಕಾರಕವಾಗಿರುವುದರಿಂದಾಗಿ ಇದು ಗಮಕ ಸಮಾಸವಾಗಿದೆ. ಇರ್ಪತ್ತರ ಐದು ಎಂದು ಅರ್ಥಮಾಡಿಕೊಳ್ಳಬೇಕು. ನೂಱಱಪತ್ತು >ನೂಱಪತ್ತು; ಮೂವತ್ತಱ ಆಱು> ಮೂವತ್ತಾಱು.

- ಸರ್ವನಾಮಕ್ಕೆ:

ಅವಮಾತು, ಅವಕಾರ್ಯ, ಅವ್ವನಾಯಕಂ..... ಅವುದು +ಮಾತು; ಅವುದು +ಕಾರ್ಯಂ, ಅವನು+ನಾಯಕಂ ಹೀಗೆ ಬಿಡಿಸಬೇಕು. ಉತ್ತರಪದದ ಅರ್ಥವೇ ಪ್ರಧಾನವಾಗಿದೆ. ವಿಗ್ರಹ ವಾಕ್ಯದಲ್ಲಿ ಸಮಾನ ವಿಭಕ್ತಿಗಳಿರುವುದರಿಂದ ಕರ್ಮಧಾರಯವೂ ಆಗುತ್ತದೆ.

- ಗುಣವಾಚಕಕ್ಕೆ :

ಅಸಿಯ ನಡು, ಪಸಿಯ ಬಣ್ಣಂ, ಬಿಳಿಯ ಕರ್ಬು, ಕಿಱಿಯ ಮಗಂ. 'ಅಸ್‌ಇಯ್‌ಅ' (ಅಸಿಯ) ಎಂಬ ಪದವನ್ನು ಗಮನಿಸಿ. ಗುಣವಾಚಕದ ಅಂತ್ಯದಲ್ಲಿ ಅಕಾರವಿದೆ. ಅದರ ಹಿಂದಿನ ಸ್ವರ (ವ್ಯಂಜನವಲ್ಲ) ಇಕಾರವಾಗಿದೆ. ಈ ಉದಾಹರಣೆಗಳನ್ನು ನೋಡಿದರೆ ಸಮಸ್ತಪದದಲ್ಲಿರಬೇಕಾದ ಬೆಸುಗೆ ಕಾಣಿಸುವುದಿಲ್ಲ. ವಿಗ್ರಹ ವಾಕ್ಯಗಳನ್ನು ಬಿಡಿಸಿ ಇಟ್ಟಂತೆ ಕಾಣುತ್ತದೆ.

- ಕೃತ್ತಿಂಗೆ :

  ಪಾಡುವ ತುಂಬಿ; ಕೋಡುವ ಪುಟಿಲ್, ಆಡಿದ ಪೊಲಂ, ಉಂಡಮರ್ದು

  ಪಾಡುವುದು +ತುಂಬಿ; ಕೋಡುವುದು (ತಣ್ಣಗಿರುವುದು) +ಪುಟಿಲ್(ಮರಳು)

  ಆಡುವುದು +ಪೊಲಂ; ಉಂಡುದು +ಅಮರ್ದು.....

  ಇಲ್ಲಿ ಉತ್ತರಪದವಾದ ಕಾರಕವು ಪೂರ್ವಪದದ ಕೃದಂತಗಳೊಡನೆ ಸೇರಿ ಗಮಕಸಮಾಸವಾಗಿದೆ.

- ಅರಿಸಮಾಸದೋಷವಿಲ್ಲದುದಕ್ಕೆ:

  ಬೀಸುವ +ಚಾಮರಂ = ಬೀಸುವ ಚಾಮರಂ. ಇಲ್ಲಿ ಬೀಸುವ ಎಂಬುದು ಕನ್ನಡ ಶಬ್ದ, ಚಾಮರಂ ಎಂಬುದು ಸಂಸ್ಕೃತ ಶಬ್ದ. ಅದೇ ರೀತಿ ಪೊಡೆವ ಭೇರಿ, ಪಿಡಿವ ಕಹಳೆ, ಪೂಸಿದ ಭಸ್ಮಂ.

- ಸರ್ವನಾಮಕ್ಕೆ ಆದೇಶವಾದುದಕ್ಕೆ

  ಅದು, ಇದು, ಉದು ಎಂಬ ಸರ್ವನಾಮಕ್ಕೆ ಗಮಕ ಸಮಾಸದಲ್ಲಿ ಆ, ಈ, ಊ, ಎಂಬುವು ಆದೇಶವಾಗಿವೆ. ಆ ಮನೆ, ಈ ಮನೆ ಊ ಮನೆ, ಎಂಬುವು ಗಮಕ ಸಮಾಸಗಳಾಗಿವೆ.

## 3.3 ತದ್ಧಿತ ಪ್ರಕರಣ (ಕೃದಂತ ಪ್ರಕರಣ)

ಶಬ್ದಗಳು ಸಾಮಾನ್ಯವಾಗಿ ಪ್ರಕೃತಿರೂಪದಲ್ಲಿರುತ್ತವೆ. ಅರ್ಥದಿಂದ ಕೂಡಿದ ಇಂಥ ಕನಿಷ್ಠಪ್ರಮಾಣದ ಪ್ರಕೃತಿಗಳು ಎರಡು ಅಥವಾ ಇನ್ನೂ ಹೆಚ್ಚಾಗಿ ಸೇರಿ ಅವು ಸಮಾಸಗಳಾಗುತ್ತವೆ ಎಂದು ತಿಳಿದಿದ್ದೇವೆ. ಇವೂ ಕೂಡ ಪ್ರಕೃತಿಗಳೇ ಆಗಿವೆ. ಆದರೆ ಇವು ನಿಷ್ಪನ್ನ ಪ್ರಕೃತಿಗಳು. ಪ್ರಕೃತಿಯೊಂದಿಗೆ ನಿಯತವಾದ ಒಂದು ಪ್ರತ್ಯಯವು ಸೇರಿ ವಿಶೇಷವಾದ ಅರ್ಥವನ್ನು ಕೊಡುವ ಮತ್ತೊಂದು ಪ್ರಕೃತಿಯು ನಿರ್ಮಾಣವಾದರೆ ಅದಕ್ಕೂ ಕೂಡ ನಿಷ್ಪನ್ನ ಶಬ್ದವೆಂಬ ಹೆಸರು ಬರುತ್ತದೆ. ಹೀಗೆ ಲಭಿಸುವ ನಿಷ್ಪನ್ನ ಶಬ್ದಗಳಲ್ಲಿ ಮೂಲಪ್ರಕೃತಿ ನಾಮವಾಚಕವಾದರೆ ಅದಕ್ಕೆ ಹತ್ತುವ ಪ್ರತ್ಯಯಗಳನ್ನು ತದ್ಧಿತ ಪ್ರತ್ಯಯಗಳೆಂದೂ, ನಿಷ್ಪನ್ನ ಶಬ್ದಗಳಿಗೆ ತದ್ಧಿತಾಂತಗಳೆಂದೂ ಹೆಸರು ಕೊಡಲಾಗಿದೆ. ನಿಷ್ಪನ್ನ ಶಬ್ದಗಳಲ್ಲಿ ಮೂಲ ಪ್ರಕೃತಿ ಧಾತುವಾಗಿದ್ದರೆ ಅದಕ್ಕೆ ಹತ್ತುವ ಪ್ರತ್ಯಯಗಳನ್ನು ಕೃತ್ಪ್ರತ್ಯಯಗಳೆಂದೂ, ನಿಷ್ಪನ್ನ ಶಬ್ದಗಳನ್ನು ಕೃದಂತಗಳೆಂದೂ ಕರೆಯುತ್ತಾರೆ. ಕೇಶಿರಾಜನು ತದ್ಧಿತಾಂತ ಮತ್ತು ಕೃದಂತಗಳೆರಡನ್ನೂ ಒಂದೇ ಪ್ರಕರಣದಲ್ಲಿ ಅಳವಡಿಸಿದ್ದಾನೆ.

ಕೇಶಿರಾಜನು ಸೂಚಿಸಿರುವ ತದ್ಧಿತಾಂತಗಳು ಹೀಗಿವೆ.

| ಪ್ರತ್ಯಯ | ಅರ್ಥಪ್ರತೀತಿ | ಉದಾಹರಣೆ |
|---|---|---|
| ಇಗ | ಮಾಡುವವನು | ಕಬ್ಬಿಗಂ |
| | ಮಾರುವವನು | ಗಂದಿಗಂ |
| | ಕೆಲಸದಲ್ಲಿರುವವನು | ಹಡಪಿಗಂ |
| | ತಿಳಿದವನು | ಜೋಯಿಸಿಗಂ; ಲೆಕ್ಕಿಗಂ |
| | ಸುಳ್ಳು | ಪುಸಿಗಂ |
| | ಋಣ | ಸಾಲಿಗಂ; ಹಂಗಿಗಂ |
| | ಆಚರಣ | ದೇಗುಲಿಗಂ |
| | ಶಿಲ್ಪ | ಚಿಪ್ಪಿಗಂ |
| | ಮೂಲ | ಮೂಲಿಗಂ |
| ವಳ | | ಮಡಿವಳಂ, ಪಡೆವಳಂ |
| ವಳ್ಳ | ಉದ್ಯೋಗ | ಅಡಪವಳ್ಳಂ, ಪಡೆವಳ್ಳಂ |

| | | |
|---|---|---|
| ಆಯ್ತ | | ಕಲ್ಲಾಯ್ತರ್, ಸೂಜೌಯ್ತರ್ |
| ವಡಿಗ | ಪದಾರ್ಥಸಂಬಂಧ | ಪುಲ್ಲವಡಿಗಂ; ಕುಂಚವಡಿಗಂ |
| ಕಾಱ | ವ್ಯವಹರಣ | ಕಯ್ದುಕಾಱಂ; ಬಂದಿಕಾಱಂ |
| ಗಾಱ | ಮಾಡು/ಮಾರು | ಮಾಲೆಗಾಱಂ; ಬಳೆಗಾಱಂ |
| ಕುಟಿಗ | ವ್ಯವಹಾರ | ಕಲ್ಕುಟಿಗಂ, ನೀರ್ಕುಟಿಗಂ |
| ಗ | | ಸಟೆಗಂ |
| ಉಳಿಗ | ಜೀವನೋಪಾಯ | ಮಣ್ಣುಳಿಗಂ, ದೇವುಳಿಗಂ |
| ಗುಳಿ | ಸ್ವಭಾವ | ಆಡುಂಗುಳಿ= ಆಡು+ಂ+ಗುಳಿ |
| | | ಲಂಚ+ಂ+ಗುಳಿ= ಲಂಚಂಗುಳಿ |
| ಉಣಿ | ಬದುಕುವವನು | ಅಮರ್ದುಣಿ ; ಕಳ್ಳುಣಿ |
| ಉಕ | ಗುಣನಿರ್ದೇಶನ | ಕಟ್ಟುಕಂ |
| ಕುಳಿ | | ಪೋರ್ಕುಳಿ |
| ಅಳಿ | | ಓದಾಳಿ |
| ಇಕ | | ಕರಿಕಂ, ಹುಸಿಕಂ |
| ಅಡಿಗ | | ಪೂವಡಿಗಂ, ಪಾವಡಿಗಂ |
| ಉಗ | ವ್ಯವಹರಣೆ | ನಾರುಗಂ, ಬೇರುಗಂ, ಪೆಣ್ಣುಗಂ |
| ಅಟಿಗ | ಆಡುವವನು | ಕೊಲ್ಲಟಿಗಂ, ದೀವಟಿಗಂ, |
| ಕ | ಭಾವ | ಒಣಕಂ, ಬಡಕಂ |
| ಇಲ | ವರ್ತಿಸು | ಪಡೆಯಿಲ, ಗಾವಿಲ |
| ಉಳ್ಳಂ | ಉಳ್ಳವನು | ಧನಮುಳ್ಳಂ |
| ಒಡೆಯ/ವಂತ | | ಗುಣಮುಳ್ಳಂ, ಪೆರ್ಮೆಯೊಡೆಯಂ |
| | | ಕೊಡೆಯೊಡೆಯಂ, ಸಿರಿವಂತಂ, ಜಯವಂತಂ. |
| ವಣಿಗ | ಜೀವಿತ | ಲಂಚವಣಿಗಂ, ಸಾಲವಣಿಗಂ |
| ಅನೆಯ | ಪ್ರಮಾಣ | ಅನಿತನೆಯಂ, ಒಂದನೆಯಂ |
| ಮೆ | ಎಣಿಕೆ | ಒರ್ಮೆ, ಇರ್ಮೆ |
| ಇತಿ | | ಚಾಮರಿಗ +ಇತಿ= ಚಾಮರಗಿತಿ |
| | | ಕನ್ನಡಿಗ +ಇತಿ= ಕನ್ನಡಿಗಿತಿ |
| | | ಒಕ್ಕಲು+ಇತಿ= ಒಕ್ಕಲಿತಿ |
| ತಿ | | ಮಣೆಗಾರ+ತಿ= ಮಣೆಗಾರ್ತಿ |
| | | ಮಾಲೆಗಾರ+ತಿ = ಮಾಲೆಗಾರ್ತಿ |
| ಅಳ್ | | ಓಸರಿಸಿದ+ಅಳ್= ಓಸರಿಸಿದಳ್ |
| | | ರಾಗಿಸಿದ +ಅಳ್ = ರಾಗಿಸಿದಳ್ |
| ಎ | | ಜೋಡೆ, ಸಿತಗೆ, ಚದುರೆ, ಪಾಣ್ಬೆ |

ತದ್ಧಿತ ಪ್ರತ್ಯಯಗಳು ಸೇರುವಲ್ಲಿ ಕೆಲವು ಕಡೆ ಪದದ ಕಡೆಯ ಸ್ವರಕ್ಕಾಗಲಿ ಅಕ್ಷರಕ್ಕಾಗಲಿ ಲೋಪವಾಗುವುದನ್ನು ಸೂತ್ರ 220ರಲ್ಲಿ ಪ್ರಸ್ತಾಪಿಸಲಾಗಿದೆ.

ತೆಲುಂಗ +ಇತಿ= ತೆಲುಂಗಿತಿ. ದೇಸಿಗ+ಇತಿ =ದೇಸಿಗಿತಿ

ಏೞು+ತ =ಏತಂ, ಓದು+ತ=ಓತಂ

ಇತಿ ಪ್ರತ್ಯಯವು ಸಂಸ್ಕೃತದ ಸ್ತ್ರೀ >ಪ್ರಾಕೃತದ ಇತ್ಥೀ ಎಂದು ರೂಪಾಂತರವಾಗುತ್ತದೆ. ಈ ಇತಿ ಎಂಬುದೇ ಸವೆದು 'ತಿ' ಎಂದು ಬಳಕೆಗೆ ಬಂದಿರಬೇಕು ಎಂಬ ಕೇಶಿರಾಜನ ಸೂಚನೆ ಗ್ರಾಹ್ಯವಾದುದು. ಇತಿಗೆ ಬದಲು ಇ ಬರುವುದನ್ನೂ ಗಮನಿಸಬೇಕು : ಉದಾ. ಅರಸ-ಅರಸಿ ನಾಗ-ನಾಗಿ, ಜೋರ-ಜೋರಿ, ನಿಂಗ-ನಿಂಗಿ.

ಸೂತ್ರ 222ರಲ್ಲಿ ಇಕೆ, ತನ, ಮೆ, ಪು, ಉ ಎಂಬುವು ತದ್ಧಿತ ಪ್ರತ್ಯಯಗಳಾದರೆ ಕೆ, ಗೆ,ಪಿ ಎಂಬುದು ಕೃತ್ಪ್ರತ್ಯಯಗಳಾಗುತ್ತವೆ. ಉಮೆ ಎಂಬ ಪ್ರತ್ಯಯವನ್ನು 'ಮೆ' ಎಂದು ಗ್ರಹಿಸಬಹುದು. 'ಅಮೆ' ಎಂಬುದು ನಿಷೇಧಾರ್ಥವನ್ನು ಸೂಚಿಸುತ್ತದೆ.

- ಇಕೆ ಎಂಬುದು ಚೇತನಭಾವವನ್ನು ಸೂಚಿಸುತ್ತದೆಂದು ಕೇಶಿರಾಜನ ಅಭಿಪ್ರಾಯ. ಅದನ್ನು ವ್ಯಂಜನಾಂತ ಪ್ರಕೃತಿಯ ಮೇಲೆ ಸೇರಿಸಬಾರದೆಂದು ಹೇಳುತ್ತಾನೆ.

  ಉದಾ. ಉದ್ಧತ +ಇಕೆ = ಉದ್ಧತಿಕೆ, ಆಯತ+ಇಕೆ = ಆಯತಿಕೆ.

  ಕಾಣ್ಕೆ, ಪೂಣ್ಕೆ ಎಂಬ ರೂಪಗಳನ್ನು ಕಾಣಿಕೆ, ಪೂಣಿಕೆ ಎಂದು ಮಾಡಬಾರದು ಎನ್ನುತ್ತಾನೆ. ಏಕೆಂದರೆ ಕಾಣ್+ಕೆ ಎಂದು ಬಿಡಿಸ ಬೇಕೆಂಬುದು ಆತನ ಅಭಿಪ್ರಾಯ. (ಕಾಣ್+ಇಕೆ) ಅಲ್ಲ ಎನ್ನುತ್ತಾನೆ. ಆದರೆ ಈಗ ಕಾಣಿಕೆ ಶಬ್ದ ರೂಪವು ತುಂಬಾ ಪ್ರಚಾರದಲ್ಲಿದೆ.

- 'ತನ' ಎಂಬ ಪ್ರತ್ಯಯವನ್ನು ಸಂಸ್ಕೃತ ಪ್ರಕೃತಿಗೆ ಸೇರಿಸಬಾರದೆಂದು ಹೇಳುತ್ತಾನೆ. 'ಗದ್ಯತನ', ಎಂಬಂತಹ ರೂಪವು ಆತನಿಗೆ ಇಷ್ಟವಿಲ್ಲ.

- ಕೃದಂತಗಳು:

  ಕೃದಂತಗಳ ಬಗ್ಗೆ ನಾಮಪ್ರಕರಣದಲ್ಲಿ ಕೃಲ್ಲಿಂಗ ವಿಚಾರದ ಬಗ್ಗೆ ಪ್ರಸ್ತಾಪ ಮಾಡಿದಾಗ ಓದಿದ್ದೀರಿ. ಇಲ್ಲಿಯೂ ಕೆಲವು ಅಂಶಗಳನ್ನು ಗಮನಿಸಿರಿ. ಇಲ್ಲಿ ಪ್ರತ್ಯಯಗಳು ಕ್ರಿಯಾಧಾತುವಿನ ಮೇಲೆ ಹತ್ತುತ್ತವೆ.

  ಉಡು+ಗೆ= ಉಡುಗೆ, ಪೊಲ್+ಗೆ =ಪೊಲ್ಗೆ, ಕಾಣ್+ಕೆ =ಕಾಣ್ಕೆ

  ಕಲ್+ಪಿ =ಕಲ್ಪಿ, ನೋನ್+ಪಿ =ನೋಂಪಿ.

  ತೀರ್+ಅಮೆ =ತೀರಮೆ (ತೀರದಿರುವುದು ), ಅಱಿ+ಅಮೆ =ಅಱಿಯುಮೆ (ತಿಳಿವಿಲ್ಲದಿರುವುದು), ಅಂಜು+ಅಮೆ=ಅಂಜುಮೆ(ಭಯವಿಲ್ಲದಿರುವುದು)

  221ನೇ ಸೂತ್ರದಲ್ಲಿ ಕೇಶಿರಾಜನು ವಿ,ವು, ತ, ತೆ ಎಂಬುವುಗಳನ್ನು ಕೃತ್ಪ್ರತ್ಯಯಗಳೆಂದು, ಇವು ಪರಸ್ಪರ ರೂಪಾಂತರಗಳೆಂದೂ, ಇವು ಸೇರುವಾಗ ಕೆಲವು ಬದಲಾವಣೆಯಾಗುತ್ತವೆಂದೂ ಹೇಳುತ್ತಾನೆ.

  ಉದಾ. ಅಳೆ +ಅ +ವಿ = ಅಳವಿ, ಬಳೆ +ಅ+ವಿ= ಬಳವಿ, ಎರೆ+ಅ+ವು =ಎರೆವು

  ಮಱೆ+ಅ+ವೆ =ಮಱವೆ, ಎಳೆ+ಅ+ವೆ= ಎಳವೆ

  ನಿಲ್+ಅ+ವು=ನಿಲವು ; ಗೆಲ್+ಅ+ವು=ಗೆಲವು, ಇರ್+ಅ+ವು=ಇರವು

  ಮೇಲಿನ ಉದಾಹರಣೆಗಳಲ್ಲಿ 'ಅ'ಎಂಬುದು ಆಗಮವಾಗುವುದನ್ನು ನೋಡಿದಿರಿ. ಹಾಗೆಯೇ 'ಅ' ಬಾರದ ನಿದರ್ಶನಗಳೂ ಇವೆ.

  ತಿಳಿ+ವು =ತಿಳಿವು, ಅಱಿ+ವು=ಅಱಿವು, ಅಱಿ+ತ=ಅಱಿತಂ

ಉರಿ+ತ=ಉರಿತಂ, ಅಗಲ್+ತೆ=ಅಗಲ್ತೆ, ನೆಗಲ್+ತೆ =ನೆಗಲ್ತೆ

ಕೆಲವು ಸಲ ಕೃದಂತಗಳಾಗುವಾಗ ಧಾತುವಿನಲ್ಲಿ ಬದಲಾವಣೆಗಳಾಗುತ್ತವೆ (ಸೂತ್ರ 224)

ಕೇಶಿರಾಜನು ಕೆಲವು ಧಾತುಗಳು ನಾಮಪಾಟಿಯಾಗುವುದನ್ನು ಗಮನಿಸಿದ್ದಾನೆ. ಇಂಗ್ಲಿಷಿನಲ್ಲಿಯೂ ಇಂತಹ ವಿಚಾರವಿದೆ.

ಡ್ರೀಮ್= ಕನಸು/ಕನಸುಕಾಣು. ರನ್/ಓಡು/ಓಟ ಇತ್ಯಾದಿಗಳಿವೆ.

ತಡೆ/ತಡೆಯುವುದು/ತಡೆಯುಂಟಾಗುವುದು. ನಡೆ =ನಡೆಯುವುದು/ನಡೆಯುವಿಕೆ (ನಡತೆ ಕೂಡ); ಉರ್ಕು= ಉಕ್ಕುವುದು/ಜಂಭ

ಮೆಟ್ಟು =ತುಳಿಯುವುದು/ ಚಪ್ಪಲಿ ಇತ್ಯಾದಿ.

## 3.4 ವಿಶೇಷ ವಿಚಾರಗಳು ಮತ್ತು ಪ್ರಯೋಗಗಳು :

1. ಅಂಶಿ ಸಮಾಸದಲ್ಲಿ ಅಡಿ+ಕಯ್(ಕಯ್ಯ+ಅಡಿ) = ಅಂಗಯ್; ಪಿಂತು+ಇಲ್ (ಇಲ್ಲ+ಪಿಂತು) = ಪಿಂತಿಲ್ ಎಂಬ ಉದಾಹರಣೆಗಳಲ್ಲಿ ಅಡಿ, ಮೇಗು ಇತ್ಯಾದಿಗಳ ಅಂತ್ಯಾಕ್ಷರಕ್ಕೆ ಬಿಂದು ಬರುತ್ತದೆ. ಮುಂದು, ಪಿಂದುಗಳ ಅಂತ್ಯಾಕ್ಷರಕ್ಕೆ ಲೋಪವೂ ಉಂಟಾಗುತ್ತದೆ. ಕೆಳಗು ಎಂಬುದಕ್ಕೆ ಕಿಟ್ ಆದೇಶವಾಗುತ್ತದೆ. ಇಲ್ಲಿ ಅಡಿ ಮತ್ತು ಮೇಗುಗಳು ಅಂ ಮತ್ತು ಮೇಂ ಹೇಗೆ ಆಗುತ್ತವೆ ಎಂಬುದು ತಿಳಿದುಬರುವುದಿಲ್ಲ. ಅಂಗಯ್, ಅಂಗಾಲ್ ಎಂಬ ಸಮಸ್ತ ಪದಗಳಲ್ಲಿ ಪೂರ್ವಪದವು ಅಗಂ (ಒಳಗೆ) ಆಗಿರಬಹುದೆ ಎಂದು 'ಕನ್ನಡ ಕೈಪಿಡಿಕಾರರು' ಊಹಿಸಿದ್ದಾರೆ. ಆಗ ಅಗಂ+ಕಯ್=ಅಗಂಗಯ್ >ಅಂಗಯ್ >ಅಂಗೈ ಆಗಿರಬಹುದು.

ಕೇಶಿರಾಜನು ವೃತ್ತಿ ಭಾಗದಲ್ಲಿ 'ಪೆಱಗೆಂಬುದಮಾ ತೆಱದಿಂ ಪಿಂತೆಂದಕ್ಕುಂ' ಎಂದು ಹೇಳಿದ್ದಾನೆ.

2. ವಿಭಕ್ತಿ ಪ್ರತ್ಯಯಗಳು ಸೇರುವಾಗ ಕೆಲವು ಆಗಮಗಳಾಗುವುವು. ಇನಾಗಮ, ದಾಗಮ, ಅನಾಗಮ ಇತ್ಯಾದಿ. ಇಂಥ ಆಗಮಗಳು ಸಮಾಸ ಕಾರ್ಯದಲ್ಲಿ ಹಿತವಾಗಿ ಹೊಂದಿಕೊಂಡು ವರ್ತಿಸುತ್ತವೆಂದೂ ವಿಭಕ್ತಿಪ್ರತ್ಯಯಗಳ ಲೋಪದೊಂದಿಗೆ ಅವೂ ಲೋಪವಾಗುವುವೆಂದೂ ಸ್ಪಷ್ಟಪಡಿಸಲಾಗಿದೆ. ಇದೇ ರೀತಿ ಶಬ್ದಗಳಲ್ಲಿ ಯಾವುದಾದರೊಂದು ವರ್ಣವನ್ನು ಪಲ್ಲಟಗೊಳಿಸಿ ಶತ್ರುವಿನಂತೆ ಅದರ ಸ್ಥಾನದಲ್ಲಿ ಬೇರೊಂದು ವರ್ಣವು ಬಂದು ಆಕ್ರಮಿಸುವುದಕ್ಕೆ ಆದೇಶವೆಂದೂ ಹೆಸರು. 'ಮಿತ್ರವತ್ ಆಗಮಃ, ಶತ್ರುವತ್ ಆದೇಶಃ' ಎಂಬ ಚಾಟುನುಡಿಯುಂಟು.

ಮಾತು+ಇನ್+ಅ+ಬಲ್ಲಂ >ಮಾತಿನ ಬಲ್ಲಹಂ> ಮಾತುವಲ್ಲಹಂ.

ಈ ಉದಾಹರಣೆಯಲ್ಲಿ ಪೂರ್ವಪದದಲ್ಲಿನ ಇನ್ ಆಗಮವೂ 'ಅ' ಎಂಬ ಷಷ್ಠೀವಿಭಕ್ತಿಪ್ರತ್ಯಯವೂ ಲೋಪವಾಗುತ್ತವೆ. ಉತ್ತರಪದದ ಆದಿಯ 'ಬ'ಕಾರಕ್ಕೆ 'ವ'ಕಾರದ ಆದೇಶವು ಬಂದಿದೆ.

ಕೆಳಗು +ಕೊಂಬು >ಕಿಟ್ಕೊಂಬು ಕೆಳಗು ಎಂಬ ಪ್ರಕೃತಿಗೆ ಕಿಟ್ ಎಂಬ ರೂಪವು ಆದೇಶವಾಗಿದೆಯೆಂದು ಕೇಶಿರಾಜನ ಅಭಿಪ್ರಾಯ. ಇದೇ ರೀತಿ, ಒಂದು >ಒರ್, ಎರಡು >ಇರ್, ಕಿಱಿದು>ಕುತ್ತ ಇತ್ಯಾದಿ ಆಗುತ್ತವೆ.

3. ಕ್ರಿಯಾ ಸಮಾಸದಲ್ಲಿ ಸಂಸ್ಕೃತದ ಅಕಾರಾಂತಕ್ಕೆ ಬಿಂದು ಕಡ್ಡಾಯ ಎಂದು ಹೇಳಲಾಗಿದೆ. ಗುಣಂಗೊಂಡಂ, ಧನಂಬಡೆದಂ ಮುಂತಾದುವುಗಳಲ್ಲಿ ಬಿಂದು ಕಡ್ಡಾಯವಾಗಿ ಬರುತ್ತದೆ. ಕೇಶಿರಾಜನು ಬಹುಳ ಎಂಬುದನ್ನಾಗಲೀ, ವಿಕಲ್ಪ ಎಂಬುದನ್ನಾಗಲೀ ಹೇಳಿಲ್ಲ. ಕನ್ನಡದಲ್ಲಿ ಬಿಂದು ಬರಬಹುದು

ಅಥವಾ ಬರದೆ ಇರಬಹುದು. ಆದರೆ ಸಂಸ್ಕೃತದಲ್ಲಿ ಮಾತ್ರ ಏಕೆ ಹೀಗೆ. ಬಹುಶಃ ಸಂಸ್ಕೃತ ಹಿಂದೆಯೇ ತನ್ನ ಬೆಳವಣಿಗೆಯನ್ನು ನಿಲ್ಲಿಸಿಕೊಂಡಿತ್ತು ಎಂದು ಊಹಿಸಬೇಕಾಗುತ್ತದೆ. ಕನ್ನಡವು ಜೀವಂತ ಭಾಷೆಯಾಗಿ ಬೆಳೆಯುತ್ತಿದ್ದುದರಿಂದ ಬದಲಾವಣೆಗಳನ್ನೂ ಅಳವಡಿಸಿಕೊಳ್ಳುತ್ತಿತ್ತು ಎಂದು ತಿಳಿಯಬೇಕಾಗುತ್ತದೆ.

4. ದ್ವಿಗು ಮತ್ತು ಗಮಕಸಮಾಸಗಳ ವ್ಯತ್ಯಾಸ :

ದ್ವಿಗು ಸಮಾಸದಲ್ಲಿ ಪೂರ್ವಪದ ಸಂಖ್ಯಾವಾಚಕವಾಗಿರುತ್ತದೆ. ಗಮಕ ಸಮಾಸದಲ್ಲಿಯೂ ಪೂರ್ವಪದ ಸಂಖ್ಯಾವಾಚಕವೇ.

ಗಮಕಕ್ಕೆ : ಉದಾ. ನೂಱಪತ್ತು = ನೂಱು+ಪತ್ತು; ಮೂವತ್ತಾಱು = ಮೂವತ್ತು+ಆಱು; ಇರ್ಪತ್ತೈದು = ಇರ್ಪತ್ತು +ಐದು.

ದ್ವಿಗು ಸಮಾಸದಲ್ಲಿ 'ನೆಲಸಿದೆ ಮೊದಲೊಳ್ ಸಂಖ್ಯೆ' ಎಂದು ಇದೆ.

ಎರಡು +ಮಾತು = ಎರಡ್ಮಾತು; ಎರಡು+ಪೆಂಡಿರ್ = ಇರ್ಪೆಂಡಿರ್

ಮೂಱು+ಬಾಳ್= ಮೂವಾಳ್

ಗಮಕದಲ್ಲಿ ಪೂರ್ವಪದ ಮತ್ತು ಉತ್ತರಪದ ಎರಡೂ ಸಂಖ್ಯಾವಾಚಕಗಳಾಗಿದ್ದರೆ ದ್ವಿಗುವಿನಲ್ಲಿ ಪೂರ್ವಪದವು ಮಾತ್ರ ಸಂಖ್ಯಾವಚಕವಾಗಿದೆ. ದ್ವಿಗುವಿನಲ್ಲಿ ಸಂಖ್ಯಾವಾಚಕಕ್ಕೆ ಆದೇಶರೂಪಗಳು ಬಂದಿವೆ. ಗಮಕದಲ್ಲಿ ನೂಱು+ಪತ್ತು ಎನ್ನುವ ಕಡೆ ನೂಱು ಎಂಬುದು ಅಕಾರಾಂತವಾಗಿ ನೂಱ ಎಂದಾಗುತ್ತದೆ. ನೂರರ ಪತ್ತು ಎನ್ನುವಾಗ ಷಷ್ಠೀ ವಿಭಕ್ತಿಯು ಗೋಚರಿಸಿದೆ, ಇಲ್ಲಿ ನೂರರ ಮೇಲೆ ಹತ್ತು ಎಂದು ಅರ್ಥಮಾಡಿಕೊಳ್ಳಬೇಕೇ ವಿನಾ ನೂರರ ಹತ್ತು ನೋಟುಗಳು ಎಂದು ತಿಳಿಯುವಂತಿಲ್ಲ.

5. ಬಹುವ್ರೀಹಿಯಲ್ಲಿ ಮುಕ್ಕಣ್ಣ, ಕಡುಜಾಗಿ, ಮೀಸಾಕ್ಷಿ ಮುಂತಾದುವುಗಳನ್ನು ಗಮನಿಸಿದನಂತರ ಕೇಶಿರಾಜನ ಸೂತ್ರದಲ್ಲಿ ಬರುವ ಮಾತನ್ನು ಗಮನಿಸಿರಿ. 'ಇತರೇತರ ಕ್ರಿಯಾಸಂಹತಂ ತಾನಾವುದು' ಎಂಬ ಪಂಕ್ತಿಯ ಭಾಗದಲ್ಲಿ ಇತರೇತರ =ಅನ್ಯೋನ್ಯ ಎಂದು ಅರ್ಥ. ಸಂಹತ=ಕಲಹ. ಅಂದರೆ ಅನ್ಯೋನ್ಯ ಕಲಹವು ಯಾವುದು ಉಂಟೋ ಅದನ್ನು ನಿರೂಪಿಸುವ ಪೂರ್ವಪದಾಂತ್ಯಕ್ಕೆ ಆಕಾರವು ಉತ್ತರ ಪದಾಂತ್ಯಕ್ಕೆ ಇ ಕಾರವೂ ಉಂಟಾಗುವುದು. ಪ್ರಯೋಗಗಳನ್ನು ಕೊಡುವ ಮುನ್ನ ಒಂದು ವಿವರಣೆಯೂ ಇದೆ. ಪರಸ್ಪರ ಖಡ್ಗದಿಂ ಮಾಡುವ ಯುದ್ಧವು ಯಾವುದೋ ಅದು ಖಡ್ಗಾಖಡ್ಗಿ, ಪರಸ್ಪರ ಮುಷ್ಟಿಯಿಂದ ಮಾಡುವ ಯುದ್ಧವು ಯಾವುದೋ ಅದು ಮುಷ್ಟಾಮುಷ್ಟಿ, ಕೂದಲನ್ನು ಪರಸ್ಪರ ಹಿಡಿದು ಹೊಡೆದಾಡುವುದು ಕಚಾಕಚಿ, ಇತ್ಯಾದಿ.

6. ನಕಾರಾಂತಗಳಾದ ಅವ್ಯಯಗಳಾಗಲಿ, ಅನುಕೃತಿ ಪದಗಳಾಗಲಿ ದ್ವಿರುಕ್ತಿಯನ್ನು ಪಡೆದಾಗ ಅವುಗಳಲ್ಲಿ ಮೊದಲನೆಯ ಪದದ ಕಡೆಯ ಅಕ್ಷರ ಲೋಪವಾಗುತ್ತದೆ.

ಉದಾ. ಅವ್ಯಯ : ಕಮ್ಮನೆ +ಕಮ್ಮನೆ= ಕಮ್ಮಕಮ್ಮನೆ

ತಣ್ಣನೆ +ತಣ್ಣನೆ +ತಣ್ಣತಣ್ಣನೆ; ತಟನೆ +ತಟನೆ =ತಟತಟನೆ

ಚಳನೆ+ಚಳನೆ=ಚಳಚಳನೆ

ನಡುವೆ ಎಂಬ ಪದವಾಗಲಿ ಕಡೆ ಎಂಬ ಪದವಾಗಲಿ ದ್ವಿರುಕ್ತಿಯಾಗಲು ಅಂದರೆ ನಡುವೆ +ನಡುವೆ; ಕಡೆ+ಕಡೆ ಎಂದು ಹೇಳುವಾಗ ಪೂರ್ವ ಪದವು ಅಕಾರಾಂತವನ್ನು ಪಡೆಯುತ್ತದೆ ಮತ್ತು ಪರುಷದ್ವಿತ್ವವಾಗುವುವು.

ನಡುವೆ + ನಡುವೆ = ನಟ್ಟನಡುವೆ. ಇಲ್ಲಿ ನಡುವೆ ಎಂಬ ಪೂರ್ವಪದದ 'ಡ' ಕಾರವು 'ಟ'ಕಾರವಾಗಿ ದ್ವಿತ್ವವಾಗುತ್ತವೆ ಮತ್ತು ಅದು ಅಕಾರಾಂತವಾಗುತ್ತದೆ. ಕಡೆ+ಕಡೆ= ಕಟ್ಟಕಡೆ, ತುದಿ+ತುದಿ=ತುತ್ತತುದಿ; ಮೊದಲ್ +ಮೊದಲ್ = ಮೊತ್ತಮೊದಲ್. ಹೊಸಗನ್ನಡದಲ್ಲಿ ತುಟ್ಟತುದಿ ಮೊಟ್ಟಮೊದಲು ಎಂದು ಹೇಳಲಾಗುತ್ತದೆ. ಇದನ್ನು ಸಾದೃಶ್ಯರೂಪ ಎಂದು ಕರೆಯುತ್ತಾರೆ.

7. ಕೇಸುರಿಯ ನುಗುಳ್ವುದೊ ನಿಶ್ವಾಸದಿನ್

ಪೆಚ್ಚನೆ, ಕೆಚ್ಚನೆ, ಬೆಚ್ಚನೆ ಎಂಬ ಶಬ್ದಗಳಲ್ಲಿ ಕೆಚ್ಚನೆ ಎಂಬುದಕ್ಕೆ ಆದಿಯ 'ಎ'ತ್ವಕ್ಕೆ ಇತ್ವ ಬರುತ್ತದೆ ಎನ್ನುತ್ತದೆ ಸೂತ್ರ. ಅದರ ಪ್ರಕಾರವೇ ಕೆಚ್ಚನೆಯ +ಪೊನ್=ಕಿಸುಪೊನ್, ಕಿಸುಸಂಜೆ, ಕಿಸುವೊಸಲ್ ಇತ್ಯಾದಿ ಆಗುತ್ತವೆ. ಆದರೆ ಮೇಲಿನ ಉದಾಹರಣೆಯು ಅಪವಾದವಾಗಿದೆ.

ಕೆಚ್ಚನೆ +ಉರಿ=ಕೇಸುರಿ ಆಗಿದೆ. ಇದು ಒಂದೇ ಅಲ್ಲ ಇನ್ನೂ ಕೆಲವು ಇದೇ ರೀತಿ ಸಮಾಸವಾಗಿವೆ. ಕೇಸಡಿ, ಕೇಸಕ್ಕಿ ಇತ್ಯಾದಿ.

## 3.5 ಪರೀಕ್ಷಾ ವಿಷಯಗಳು

### 3.5.0 ಸ್ವಪರೀಕ್ಷಾ ಪ್ರಶ್ನೆಗಳು

೧. ಉತ್ತರಪದಾರ್ಥ ಪ್ರಧಾನ ಸಮಾಸಗಳಾವುವು?

.......................................................................................................

.......................................................................................................

.......................................................................................................

೨. ಕರ್ಮಧಾರಯ ಸಮಾಸದ ಬಗ್ಗೆ ತಿಳಿಸಿ.

.......................................................................................................

.......................................................................................................

.......................................................................................................

೩. ಅಂಶಿ ಸಮಾಸದ ಸಮಸ್ಯೆಯನ್ನು ತಿಳಿಸಿ.

.......................................................................................................

.......................................................................................................

.......................................................................................................

೪. ಗಮಕ ಸಮಾಸದ ವೈಶಿಷ್ಟ್ಯವೇನು?

.......................................................................................................

.......................................................................................................

.......................................................................................................

.......................................................................................................

.......................................................................................................

೫. ಕ್ರಿಯಾ ಸಮಾಸದಲ್ಲಿ ಬಿಂದು ವಿಚಾರವನ್ನು ವಿವರಿಸಿ.

...................................................................................................

...................................................................................................

...................................................................................................

೬. ತದ್ಧಿತಾಂತಗಳು ಎಂದರೇನು?

...................................................................................................

...................................................................................................

...................................................................................................

...................................................................................................

೭. ಅರಿಸಮಾಸದ ಬಗ್ಗೆ ತಿಳಿಸಿ.

...................................................................................................

...................................................................................................

...................................................................................................

೮. ಸಮಾಸದಲ್ಲಿ ಏಕಾಶ್ರಯ ಎಂದರೇನು?

...................................................................................................

...................................................................................................

...................................................................................................

## 3.5.1 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

೧. ಸಮಾಸಗಳಲ್ಲಿ ಭಾಗವಹಿಸುವ ಎರಡು ಪದಗಳಲ್ಲಿ ಮೊದಲನೆಯದು ಪೂರ್ವಪದ, ಎರಡನೆಯದು ಉತ್ತರಪದ. ಕೆಲವು ಸಮಾಸಗಳಲ್ಲಿ ಉತ್ತರಪದದ ಅರ್ಥವು ಮುಖ್ಯವಾಗಿರುತ್ತದೆ. ಅಂತಹ ಸಮಾಸಗಳೆಂದರೆ ತತ್ಪುರುಷ ಸಮಾಸ, ಕರ್ಮಧಾರಯ ಸಮಾಸ, ದ್ವಿಗು ಸಮಾಸ, ಕ್ರಿಯಾಸಮಾಸ, ಗಮಕಸಮಾಸ. ತತ್ಪುರುಷಕ್ಕೆ ಉದಾಹರಣೆಯಾಗಿ ಮರಗಾಲು ಎಂಬುದನ್ನು ತೆಗೆದುಕೊಂಡರೆ ಉತ್ತರ ಪದವಾದ ಕಾಲು ಪ್ರಧಾನವಾದುದು ಕರ್ಮಧಾರಯಕ್ಕೆ ಒಳ್ಗನ್ನಡ ಎಂಬ ಸಮಸ್ತ ಶಬ್ದವನ್ನು ತೆಗೆದುಕೊಂಡರೆ ಒಳ್+ಕನ್ನಡ ಎಂಬ ವಿಗ್ರಹವಾಕ್ಯದಲ್ಲಿ ಕನ್ನಡ ಪದವು ಉತ್ತರ ಪದ ಹಾಗೂ ಪ್ರಧಾನವೂ ಆಗಿದೆ. ದ್ವಿಗು ಸಮಾಸದಲ್ಲಿ ಪೂರ್ವಪದ ಸಂಖ್ಯಾವಾಚಕವಾಗಿರುತ್ತದೆ. ಎರಡು + ಬಾಳ್ =ಇರ್ಬಾಳ್. ಬಾಳ್ ಎಂದರೆ ಕತ್ತಿ. ಆದ್ದರಿಂದ ಕತ್ತಿಯು ಪ್ರಧಾನವಾದ ಪದವಾಗಿದೆ. ಅದು ಉತ್ತರ ಪದವಾಗಿರುವುದರಿಂದ ದ್ವಿಗು ಸಮಾಸವು ಉತ್ತರಪದಾರ್ಥ ಪ್ರಧಾನ ಸಮಾಸವಾಗಿದೆ. ಕ್ರಿಯಾ ಸಮಾಸಕ್ಕೆ ಉದಾಹರಣೆಯಾಗಿ ಬಳೆದೊಟ್ಟಂ ನೋಡಿದರೆ ಕ್ರಿಯೆಯು ತೊಟ್ಟಂ ಎಂಬುದು. ಕ್ರಿಯಾ ಸಮಾಸದಲ್ಲಿ ಕ್ರಿಯೆಯೇ ಪ್ರಧಾನವಾದುದು. ಆದ್ದರಿಂದ ಇದೂ ಕೂಡ ಉತ್ತರ ಪದ ಪ್ರಧಾನವಾಗಿದೆ. ಗಮಕಕ್ಕೆ ಉದಾಹರಣೆಯಾಗಿ 'ಬೀಸುವ ಚಾಮರಂ' ಎಂಬುದನ್ನು ನೋಡಿದರೆ ಉತ್ತರಪದ ಚಾಮರವು ಪ್ರಧಾನವಾಗಿರುವುದು ಕಂಡು ಬರುತ್ತದೆ.

೨. ಕರ್ಮಧಾರಯ ಸಮಾಸವು ತತ್ಪುರುಷದ ಒಂದು ಭೇದವಾಗಿದೆ. ಪೂರ್ವಪದವು ಉಕಾರ ಅಥವಾ ಇಕಾರದಿಂದ ಕೂಡಿದ ಕೃದಂತವಾಗಿದ್ದು ಉತ್ತರಪದದ ಆದಿಯಲ್ಲಿ ಗದಬಜಕಾರಗಳಿದ್ದಾರೆ ಮಧ್ಯೆ ಬಿಂದು ಬರುತ್ತದೆ. ಉತ್ತರಪದದ ಅರ್ಥವು ಪ್ರಧಾನ. ಉದಾಹರಣೆ ಒಳ್ಳಿತು +ಕನ್ನಡ = ಒಳ್ಗನ್ನಡ, ಪಿರಿದು+ಆನೆ =ಪೇರಾನೆ, ಚಿಕ್ಕದು+ಮಗು =ಚಿಕ್ಕಮಗು: ಸಂಸ್ಕೃತ ಶಬ್ದಗಳ ಸೇರುವಿಕೆಯಲ್ಲಿ ನೀಲೋತ್ಪಲ, ಶ್ವೇತಛತ್ರ ಇತ್ಯಾದಿಗಳಿವೆ. ಇಲ್ಲಿ ಪೂರ್ವಪದವು ವಿಶೇಷಣವಾಗಿರುವುದರಿಂದ ಕರ್ಮಧಾರಯವನ್ನು 'ವಿಶೇಷಣ ಪೂರ್ವಪದ ಕರ್ಮಧಾರಯ' ಎಂದು ಕರೆಯುತ್ತಾರೆ.

೩. ಅಂಶಿ ಸಮಾಸವನ್ನು ಅವ್ಯಯೀಭಾವ ಸಮಾಸವೆಂದೂ ಕರೆಯುತ್ತಾರೆ. ಇದರಲ್ಲಿ ಪೂರ್ವಪದದ ಅರ್ಥವು ಪ್ರಧಾನವಾಗಿದೆ. ಇದರಿಂದದಾಗಿ ವಿಗ್ರಹ ವಾಕ್ಯಮಾಡುವ ರೀತಿಯನ್ನು ಅದಕ್ಕ ಅನುಗುಣವಾಗಿ ಮಾಡಬೇಕಾಗುತ್ತದೆ. ಅಂದರೆ ಪೊದೆಯ +ಕಳಗು = ಕಿಟ್‌ಪೊಡೆ > ಕಿಜ್ಪೊಡೆ

ಕೈಯ+ಅಡಿ > ಅಂ+ಕೈ =ಅಂಗೈ; ಇಲ್‌ನ +ಪೞಗು >ಪಿಂತ್+ಇಲ್>ಪಿಂತಿಲ್: ಒಲೆಯ+ಪೞಗು>ಪಿಂತ್ ಒಲೆ =ಪಿಂತೊಲೆ

ಸ್ಥೂಲದೃಷ್ಟಿಗೆ ಇದು ತತ್ಪುರುಷ ಸಮಾಸದಂತೆ ತೋರುತ್ತದೆ. ಭಟ್ಟಾಕಳಂಕನು ಇದನ್ನು ಅಂಶಿಸಮಾಸವೆಂದು ಕರೆದಿದ್ದಾನೆ. ಆಧುನಿಕರು ಸಮಸ್ತಪದದ ವಿಗ್ರಹವಾಕ್ಯವನ್ನು ಬೇರೆ ರೀತಿಯಲ್ಲಿ ಬರೆಯುತ್ತಾರೆ. ಕೈಯ+ಅಡಿ ಎಂದು ಬರೆದು ಅದನ್ನು ಅಡಿ+ಕೈ =ಅಡಿಗೈ >ಅಂಗೈ ಎಂದು ಕರೆಯುವ ಬದಲು ಅಗಂ+ಕೈ, ಅಗಂ+ಕಾಲ್ ಎಂದು ಬಿಡಿಸಬಹುದೆನ್ನುತ್ತಾರೆ. ಅಗಂ ಎಂದರೆ ಒಳಗು ಎಂಬ ಅರ್ಥವಿದೆ.

೪. ಗಮಕ ಸಮಾಸವು ಮೇಲುನೋಟಕ್ಕೆ ಸಮಾಸದಂತೆ ಕಾಣುವುದಿಲ್ಲ. 'ತನಗತ್ತಂ ಪೆಱಗಿತ್ತಂ'ಎಂದು ಸೂತ್ರಾತ್ಮಕವಾಗಿ ಹೇಳುವ ವಾಡಿಕೆಯುಂಟು. ಕರ್ಮಧಾರಯಮದುವುಂ ಎಂದೂ ಹೇಳಲಾಗಿದೆ. ಪೂರ್ವಪದವು ಸಂಖ್ಯಾವಾಚಕವಾಗಿರಬಹುದು, ಸರ್ವನಾಮವಾಗಿರಬಹುದು, ಗುಣವಚನ, ಕೃದಂತಗಳಾಗಿರಬಹುದು. ಉತ್ತರಪದವು ಕಾರಕವಾಗಿದ್ದರೆ ಅದು ಗಮಕವೆಂದು ಕರೆದಿದ್ದಾನೆ (ಕೇಶಿರಾಜ). ದ್ವಿಗು ಮತ್ತು ಗಮಕ ಸಮಾಸಗಳ ಬಗ್ಗೆ ಸ್ಥೂಲನೋಟಕ್ಕೆ ಗೊಂದಲವೇರ್ಪಡಬಹುದು. ಗಮಕಸಮಾಸವು ತನ್ನ ಅಂತರಾಳದ ಷಷ್ಠಿಯ ಅಕಾರದಿಂದಾಗಿ, ತತ್ಪುರುಷದ ಒಂದು ಪ್ರಭೇದವೂ ಆಗುತ್ತದೆ. ಗಮಕವು ಕರ್ಮಧಾರಯದಿಂದ ಹೇಗೆ ಭಿನ್ನ ಎಂಬುದನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಪೂರ್ವಪದ ಸರ್ವನಾಮವಾಗಿರುವುದು ಒಂದು ವಿಶಿಷ್ಟವಾದ ಅಂಶವಾಗಿದೆ. ಇದರಲ್ಲಿ ಅರಿಸಮಾಸದ ದೋಷವೂ ಇರುವುದಿಲ್ಲ.

೫. ಕ್ರಿಯಾ ಸಮಾಸವೆಂದರೆ ಕಾರಕವು ಪೂರ್ವಪದದ ಜಾಗದಲ್ಲಿದ್ದು ಉತ್ತರ ಪದದಲ್ಲಿ ಕ್ರಿಯಾಪದವಿರಬೇಕು. ಇದರಲ್ಲಿ ಬಿಂದು ವಿಚಾರವು ಚರ್ಚಾಸ್ಪದವಾಗಿದೆ. ೧. ಸಂಸ್ಕೃತದ ಅಕಾರಾಂತ ಕಾರಕಗಳಿದ್ದರೆ ಬಿಂದು ಕಡ್ಡಾಯವಾಗಿ ಬರುತ್ತದೆ. ೨. ಕನ್ನಡದ ಅದಂತ ಉದಂತ ಕಾರಕಗಳಿದ್ದರೆ ಬಿಂದು ಕಡ್ಡಾಯವಲ್ಲ. ೩. ಇದು ಸಂಸ್ಕೃತದಲ್ಲಿ ಇಲ್ಲದ, ಕನ್ನಡಕ್ಕೆ ಮೀಸಲಾದ ಸಮಾಸವಾಗಿದೆ. ಸಂಸ್ಕೃತದಲ್ಲಿ ಗುಣಮಂ+ಕೊಂಡಂ= ಗುಣಂಗೊಂಡಂ, ಪ್ರಿಯಂನುಡಿದಂ, ಧನಂಬಡೆದಂ ಎಂದು ಬಿಂದುವು ಮಧ್ಯದಲ್ಲಿ ಕಡ್ಡಾಯವಾಗಿ ಬರುತ್ತದೆ. ಆದರೆ ಇಲ್ಲಿ ಬಿಂದು ಪ್ರವೇಶವು ಹೊಸದಾಗಿ ಆಗಿಲ್ಲ ಎನ್ನಬಹುದು. ಕಾರಕಗಳಲ್ಲಿಯೇ ಬಿಂದುವಿರುವುದನ್ನು ಗಮನಿಸಬಹುದು. ಗುಣಂ, ಧನಂ ಮುಂತಾಗಿ ಅವುಗಳು ಬಿಂದು ಸಮೇತವಾಗಿಯೇ ಇವೆ. ಕ್ರಿಯಾ ಸಮಾಸದಲ್ಲಿ ಅರಿಸಮಾಸವು ದೋಷವಲ್ಲ ಎಂಬುದನ್ನು ಗಮನಿಸಬೇಕು. ಅರಿಸಮಾಸವು ತತ್ಪುರುಷ ಕರ್ಮಧಾರಯ ಮುಂತಾದುವುಗಳಲ್ಲಿ ಪೂರ್ಣವಾಗಿ ನಿಷಿದ್ಧವಾಗಿದೆ. ಕ್ರಿಯಾ ಸಮಾಸಕ್ಕೆ ಉದಾಹರಣೆ ಕೊಡುವಾಗ ಕೇಶಿರಾಜನು ಕೊಡುವ ಒಂದು ಉದಾಹರಣೆಯು ವ್ಯಾಕರಣ ಕ್ಷೇತ್ರದಿಂದ ಹೊರಗೆ ರಾಜಕೀಯ ಕ್ಷೇತ್ರಕ್ಕೆ ಸಲ್ಲುವುದು ಆಶ್ಚರ್ಯಕರವಾದುದು.

'ಕಾವೇರಿಯ ಕಾಲನಾ ತಿಗುಳನೇಂ ಕಡಗೊಂಡನೊ ಬಡ್ಡಿಗೊಂಡನೋ.....' ಬಹಳ ಹಿಂದಿನಿಂದಲೂ ತಿಗುಳ (ತಮಿಳ) ನು ಕಾವೇರಿ ನೀರಿನ ಮೇಲೆ ಅಧಿಕಾರ ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಈ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ. ಕೇಶಿರಾಜನಿಗಿಂತ ಹಿಂದೆ ಇದ್ದ ಕವಿ ಬರೆದ ವಾಕ್ಯವಿದು. ಎಷ್ಟು ಆಶ್ಚರ್ಯಕರವಾಗಿದೆ ನೋಡಿ.

೬. ಸಂಸ್ಕೃತ ಕೋಶಗಳಲ್ಲಿ ತದ್ಧಿತ ಎಂಬ ಶಬ್ದಕ್ಕೆ ತತ್+ಹಿತ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ವ್ಯಾಕರಣದ ದೃಷ್ಟಿಯಿಂದ ನೋಡಿದರೆ ದ್ರಾವಿಡ ಶಬ್ದಗಳಿಗೆ ಪರಪ್ರತ್ಯಯಗಳು ಸೇರುವುದು ಸಾಮಾನ್ಯ, ಅದೇ ರೀತಿ ಸಾಧಿತನಾಮಗಳನ್ನು ರೂಪಿಸಿಕೊಳ್ಳುವಾಗ ಸೇರುವ ಪ್ರತ್ಯಯಗಳು ತದ್ಧಿತ ಪ್ರತ್ಯಯಗಳು. ಒಂದು ಭಾಷೆಯು ತನ್ನ ಪರಿಧಿಯೊಳಗೇ ಬೆಳೆಯುವ ರೀತಿಯೂ ಇದಾಗಿದೆ. ಅನ್ಯಭಾಷಾ ಸ್ವೀಕರಣ ಕಾರ್ಯವು ನಂತರದ್ದು. ಈ ನಿಷ್ಪನ್ನಶಬ್ದಗಳು ಕೋಶಕ್ಕೆ ಅಮೂಲ್ಯ ನಿಧಿಗಳಾಗಿರುತ್ತವೆ.

ನಾಮವಾಚಕ + ತದ್ಧಿತಪ್ರತ್ಯಯ = ತದ್ಧಿತಾಂತ

ತದ್ಧಿತಾಂತಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ. ಕೇಶಿರಾಜನು ತದ್ಧಿತಾಂತಗಳನ್ನು ತದ್ಧಿತಲಿಂಗ ಎಂದು ಕರೆದಿದ್ದಾನೆ. ತದ್ಧಿತ ಪ್ರತ್ಯಯಗಳು ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿವೆ. ಜನರು ತಮ್ಮ ಅನುಕೂಲಕ್ಕೆ ರೂಪಿಸಿಕೊಂಡ ತದ್ಧಿತಾಂತಗಳನ್ನು ವೈಯಾಕರಣರು ತೆಗೆದುಕೊಂಡು ತದ್ಧಿತಾಂತಗಳಲ್ಲಿರುವ ಪ್ರತ್ಯಯಗಳನ್ನು ಪ್ರತ್ಯೇಕಿಸಿ ತೋರಿಸುತ್ತಾರೆ. ಉದಾಹರಣೆಗೆ ಜನರು ಮಡಿವಾಳ ಎನ್ನುತ್ತಾರೆ. ವೈಯಾಕರಣನು ಅದನ್ನು ಮಡಿ+ ವಾಳ (ವಳ) > ಮಡಿವಳ /ಮಡಿವಾಳ ಎಂದು ತೋರಿಸುತ್ತಾನೆ. ಅದೇ ರೀತಿಯಲ್ಲಿ ಕಬ್ಬಿಗಂ (ಇಗ); ಮಾಲೆಗಾರಂ (ಕಾರ/ಗಾರ) ಕಲ್ಕುಟಿಗಂ: ಪೂವಡಿಗಂ; ಸಿರಿವಂತಂ, ಅಕ್ಕಸಾಲಿಗಂ, ಮಾಲೆಗಾರ್ತಿ, ಚಿಪ್ಪಿಗಂ, ಜೂದುಂಗಾಱ ಇತ್ಯಾದಿ.

೭. ಅರಿಸಮಾಸದ ವಿಚಾರವು ಸಂಸ್ಕೃತ ಮತ್ತು ಕನ್ನಡ ಶಬ್ದಗಳನ್ನು ಸೇರಿಸಿ ಸಮಾಸಮಾಡುವ ಸಂದರ್ಭಗಳಲ್ಲಿ ಹುಟ್ಟಿಕೊಂಡದ್ದು.

ಪದವಿಧಿ ಕನ್ನಡಕಂ ಪ<br>
ಕ್ಕದಕ್ಕಮಿಲ್ಲಾದ್ಯರಿಂದೆ ಸಂದುವನಱಿದಿ<br>
ರ್ಪುದು ಬಿರುದಾವಳಿಯೊಳ್ ಪೇ<br>
ೞ್ವುದು ಪೆಱವೆಡೆಯೊಳಾಗದಿದು ವಿರುದ್ಧಸಮಾಸಂ.

ಕೇಶಿರಾಜನು ಕನ್ನಡ ಮತ್ತು ಸಂಸ್ಕೃತ ಶಬ್ದಗಳನ್ನು ಸೇರಿಸಿ ಸಮಾಸ ಮಾಡಬಾರದು ಎನ್ನುವಾಗ, ಕವಿಗಳು ಆಗಲೇ ಬಳಸಿರುವುದನ್ನು ಮನ್ನಿಸುತ್ತಾನೆ, ಏನೋ ಆಗಿಹೋಗಿದೆ ಬಿಡಿ, ನೀವು ಮಾಡಬೇಡಿ ಎಂಬ ಧಾಟಿಯಲ್ಲಿ ನುಡಿಯುತ್ತಾನೆ. ಆತನ ಧಾಟಿಯು ಆಜ್ಞೆಗಳನ್ನು ಕೊಡುವ ಪ್ರಭುವಿನಂತೆ ಕಾಣುವುದಿಲ್ಲ. 'ಏನೋ ನಿಮ್ಮ ಒಳ್ಳೆಯದಕ್ಕೆ ಹೇಳುತ್ತೇನೆ, ಅರಿಸಮಾಸ ಮಾಡಬೇಡಿ' ಎನ್ನುವ ಧಾಟಿಯು ಆತನ ಸೌಜನ್ಯವನ್ನು ತೋರಿಸುತ್ತದೆ.

'ಮುಖತಾವರೆ, ಅರಸುಕುಮಾರಂ, ಕೆಳದಿಸಮೇತಂ' ಎಂಬಂತೆ ಮಾಡಬಾರದು ಎನ್ನುತ್ತಾನೆ. ಈಗಾಗಲೇ ರೂಢಿಯಲ್ಲಿರುವ 'ಕಪುರಾಗಂ, ಕಟ್ಟೇಕಾಂತಂ, ಕೂರಸಿ, ತುಱುಗವಳಂ, ಮಂಗಳಾರತಿ' ಮುಂತಾದುವನ್ನು ಬಳಸಬಹುದು ಎನ್ನುತ್ತಾನೆ.

ಬಿರುದುಗಳನ್ನು ಹೇಳುವಾಗ ಅರಿಸಮಾಸವನ್ನು ಒಪ್ಪಿಕೊಳ್ಳಬಹುದು ಎಂದಿದ್ದಾನೆ. 'ನರಲೋಕವಲ್ಲಭಂ, ಮದನ ಮಹೇಶ್ವರಂ, ಅಂಕತ್ರಿಣೇತ್ರಂ, ಗುಣಕ್ಕೆ ನಲ್ಲ ಗಣೇಶಂ, ರಾಯಕೋಳಾಹಳಂ' ಇತ್ಯಾದಿಗಳನ್ನು ಮಾಡಬಹುದು ಎನ್ನುತ್ತಾನೆ.

ಮಹತ್ ಶಬ್ದಕ್ಕೆ ಆದೇಶವಾಗಿ ಬರುವ 'ಮಾ' ಎಂಬುದಕ್ಕೆ ಸಂಸ್ಕೃತವು ಉತ್ತರಪದವಾಗಿ ಸೇರಿದರೆ ಅರಿಸಮಾಸ ದೋಷವಿಲ್ಲ ಎನ್ನುತ್ತಾನೆ. ಮಹತ್ (ಮಾ) + ದೇವಂ =ಮಾದೇವಂ, ಮಾಕಾಳಿ, ಮಾದಾನಿ, ಇತ್ಯಾದಿ ಕ್ರಿಯಾಸಮಾಸ, ಗಮಕಸಮಾಸಗಳಲ್ಲಿ ಅರಿಸಮಾಸದೋಷವಿಲ್ಲ ಎಂದು ತಿಳಿಸುತ್ತಾನೆ.

೮. ಏಕಾಶ್ರಯ ಎಂದರೆ ಅನ್ಯೋನ್ಯಾಶ್ರಯಂ ಎಂಬ ಅರ್ಥವನ್ನು ನಿಟ್ಟೂರು ನಂಜಯ್ಯ ಎಂಬ ವ್ಯಾಖ್ಯಾನ ಕಾರನು ಹೇಳಿದ್ದಾನೆ. ಸಮಾಸದಲ್ಲಿ ಭಾಗವಹಿಸುವ ಪದಗಳನ್ನು ಗಮನಿಸಿದರೆ ಒಂದು ಅಂಶ ಸ್ಪಷ್ಟವಾಗುತ್ತದೆ. ತತ್ಪುರುಷ ಸಮಾಸದ ವಿಗ್ರಹ ವಾಕ್ಯಗಳನ್ನು ಬರೆಯುವಾಗ ಪೂರ್ವಪದ ಬೇರೆ ಬೇರೆ ವಿಭಕ್ತಿಗಳಲ್ಲಿ ಇದ್ದು ಉತ್ತರಪದವು ಪ್ರಥಮಾ ವಿಭಕ್ತಿಯಲ್ಲಿರುವುದನ್ನು ಕಾಣುತ್ತೇವೆ.

ಉದಾ. ಮೆಯ್ಯಿಂ +ಕಲಿ = ಮೆಯ್ಗಲಿ; ತೇರ್ಗೆ + ಮರಂ = ತೇರ್ಮರಂ

ಕರ್ಮಧಾರಯದಲ್ಲಿ ಪೂರ್ವಪದ ಮತ್ತು ಉತ್ತರಪದ ಎರಡೂ ಒಂದೇ ವಿಭಕ್ತಿಯಲ್ಲಿ ರುತ್ತವೆ. ಇದಕ್ಕೆ ಏಕಾಶ್ರಯ ಅಥವಾ ಸಮಾನಾಧಿಕರಣ ಎಂದು ಹೆಸರು.

ಬಿಳಿದು +ಕೊಡೆ = ಬೆಳ್ಗೊಡೆ, ಪರಿವುದು +ಪೊನಲ್ = ಪರಿವೊನಲ್ ಇತ್ಯಾದಿ.

## 3.5.2 ಅಭ್ಯಾಸ ಪ್ರಶ್ನೆಗಳು

೧. ಸಮಾಸ ಎಂದರೇನು?

೨. ಷಷ್ಠೀ ತತ್ಪುರುಷ ಸಮಾಸದ ಲಕ್ಷಣವೇನು?

೩. ಬಹುವ್ರೀಹಿ ಸಮಾಸದ ಬಗ್ಗೆ ತಿಳಿಸಿ.

೪. ಜನಪದರು ಬಳಸುವ ಸಮಸ್ತ ಪದಗಳ ಬಗ್ಗೆ ತಿಳಿಸಿ.

ಸಂಚಿಕೆ - 10

ವ್ಯಾಕರಣ

ಘಟಕ - 4

# ಶಬ್ದಮಣಿದರ್ಪಣಂ : ಆಖ್ಯಾತ ಪ್ರಕರಣ, ಧಾತು ಪ್ರಕರಣ, ಅಪಭ್ರಂಶ ಪ್ರಕರಣ, ಅವ್ಯಯ ಪ್ರಕರಣ

ಪರಿವಿಡಿ

## 4.0 ಉದ್ದೇಶ

- ಕ್ರಿಯಾಪದದ ಸ್ವರೂಪ ಮತ್ತು ವಿವಿಧ ಬಗೆಗಳನ್ನು ತಿಳಿಯುವುದು.
- ಕ್ರಿಯಾಪದಕ್ಕೆ ಹತ್ತುವ ಆಖ್ಯಾತ ಪ್ರತ್ಯಯಗಳ ಬಗ್ಗೆ ಸಮೀಕ್ಷೆ ಮಾಡುವುದು
- ಸಾಮಾನ್ಯಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ, ಪ್ರೇರಣಾರ್ಥಕ ಕ್ರಿಯಾಪದಗಳನ್ನು ಗುರುತಿಸುವುದು
- ಕ್ರಿಯಾಪದಗಳ ಮೇಲೆ ಹತ್ತುವ ಆಖ್ಯಾತ ಪ್ರತ್ಯಯಗಳು ನಾಮ ಪ್ರಕೃತಿಗಳ ಮೇಲೆಯೂ ಹತ್ತುವುದರಬಗ್ಗೆ ಚರ್ಚಿಸುವುದು
- ಕಾಲವಾಚಕ ಪ್ರತ್ಯಯಗಳನ್ನು ಕುರಿತು ವಿಶ್ಲೇಷಣೆ ಮಾಡುವುದು
- ಧಾತುಗಳಿಗೆ ಕಾಲವಾಚಕ ಪ್ರತ್ಯಯಗಳು ಹತ್ತಿದಾಗ ಕಂಡುಬರುವ ಮಾರ್ಪಾಟುಗಳನ್ನು ಗಮನಿಸುವುದು.
- ಅಪೂರ್ಣಕ್ರಿಯಾಪದ ರೂಪವೇನೆಂಬುದನ್ನು ನೋಡುವುದು.
- ಕನ್ನಡ ಶಬ್ದಸಂಪತ್ತು ಸಂಸ್ಕೃತ ಶಬ್ದಗಳ ಮೂಲಕ ಸಮೃದ್ಧವಾದ ಬಗೆಯನ್ನು ತಿಳಿಯುವುದು
- ತದ್ಭವಗಳು ರೂಪುಗೊಳ್ಳುವ ವಿಧಾನವನ್ನು ಅರ್ಥಮಾಡಿಕೊಳ್ಳುವುದು.
- ದ್ರಾವಿಡ ಜ್ಞಾತಿ ಶಬ್ದಗಳನ್ನು ತದ್ಭವದಿಂದ ಪ್ರತ್ಯೇಕಿಸುವುದು.
- ಲಿಂಗ, ವಚನ, ವಿಭಕ್ತಿಗಳನ್ನು ಹೊಂದದ ಅವ್ಯಯಗಳ ಪರಿಚಯ ಮಾಡಿಕೊಳ್ಳುವುದು
- ಕೇಶಿರಾಜನು ಹೇಳಿರುವ ಕನ್ನಡದ ಅಸಾಧಾರಣ ಲಕ್ಷಣಗಳನ್ನು ತಿಳಿಯುವುದು.

## 4.1 ಪೀಠಿಕೆ

ಪ್ರಪಂಚದ ವ್ಯವಹಾರಗಳೆಲ್ಲವೂ ಮಾತಿನ ಮೂಲಕ, ಬರಹದ ಮೂಲಕ ನಡೆಯುತ್ತವೆ. ಆಡಿದ ಮಾತುಗಳನ್ನು ಮತ್ತು ಮುಂದೆ ಆಡಬೇಕಾದ ಮಾತುಗಳನ್ನು ಲಿಪಿಯ ಮೂಲಕ ಬರೆಯುವುದೇ ಬರವಣಿಗೆ ಎನಿಸುತ್ತದೆ. ಶುದ್ಧವಾಗಿ ಮಾತನಾಡುವುದು, ಶುದ್ಧವಾಗಿ ಬರೆಯುವುದು ವಿದ್ಯಾವಂತರ ಲಕ್ಷಣವಾಗಿದೆ. ಶುದ್ಧವಾಗಿ, ಅರ್ಥಪೂರ್ಣವಾಗಿ ಬರೆಯಬೇಕಾದರೆ ವ್ಯಾಕರಣ ಶಾಸ್ತ್ರದ ಪರಿಚಯವಿರಬೇಕು. ವಿಷಯವನ್ನು ಬರೆಯುವ ಕಾರ್ಯವನ್ನು ಕೈಗೊಂಡರೆ, ಕ್ರಿಯಾಪದ ಬಹಳ ಮುಖ್ಯವಾಗುತ್ತದೆ. ಒಂದು ಭಾಷೆಯ ಕ್ರಿಯಾಪದವನ್ನು ಚೆನ್ನಾಗಿ ತಿಳಿದುಕೊಂಡರೆ ಭಾಷೆಯು ಸುಲಭವಾಗುತ್ತದೆ. ಯಾವ ಭಾಷೆಯನ್ನು ಚೆನ್ನಾಗಿ ಕಲಿಯಬೇಕೆಂದರೆ ಕ್ರಿಯಾಪದದ ಬಗ್ಗೆ ಚೆನ್ನಾಗಿ ತಿಳಿದುಕೊಳ್ಳಬೇಕು. ಅಭಿಪ್ರಾಯವನ್ನು ನಿಷ್ಕೃಷ್ಟವಾಗಿ ತಿಳಿಸಬೇಕೆಂದರೆ ಕ್ರಿಯಾಪದದ ಸ್ವರೂಪವನ್ನು ಬಹಳ ಚೆನ್ನಾಗಿ ಅಧ್ಯಯನಮಾಡಿರಬೇಕು. ಪುರುಷಸೂಚಕ, ಕಾಲಸೂಚಕ ಮುಂತಾದ ಪ್ರತ್ಯಯಗಳನ್ನು ತಿಳಿಯದೆ ಹೊಸಬರು ಪ್ರಯೋಗಿಸಿದಾಗ ಹಾಸ್ಯವು ಹುಟ್ಟಿಕೊಳ್ಳುತ್ತದೆ. ನಾನು ಬೆಂಗಳೂರಿಗೆ ಹೋಗುತ್ತಾನೆ, ಕೋತಿಗಳು ಬರ್ತಿದ್ದಾರೆ, ಅವನು ಬರ್ತಿದ್ದಾಳೆ ಇತ್ಯಾದಿ ವಾಕ್ಯಗಳನ್ನು ಅನ್ಯಭಾಷಿಗರು ಪ್ರಯೋಗಿಸುತ್ತಾರೆ. ಏಕೆಂದರೆ ಅವರು ಜನಬಳಕೆಯ ಮಾರ್ಗದಿಂದ ಭಾಷೆಯನ್ನು ಕಲಿತಿರುತ್ತಾರೆಯೇ

ವಿನಾ ವ್ಯಾಕರಣದ ಮೂಲಕ ಕಲಿತಿರುವುದಿಲ್ಲ. ಕನ್ನಡಿಗರು ಉತ್ತರ ಭಾರತದ ಕಡೆ ಹೋದರೆ ಅಲ್ಲಿಯ ವ್ಯಾಕರಣ ಇನ್ನೂ ಕ್ಲಿಷ್ಟವಾದುದು. ಅಲ್ಲಿ ಲಿಂಗಗಳು ಶಬ್ದಾನುಸಾರಿಯಾಗಿರುವುದರಿಂದ ಪುರುಷರು ಪುಲ್ಲಿಂಗ, ಸ್ತ್ರೀಯರು ಸ್ತ್ರೀಲಿಂಗ ಎಂದು ನಮ್ಮ ಹಾಗೆ ತಿಳಿಯಲಾಗದು. ಮೀಸೆ ಎಂಬುದು ಹಿಂದಿಯಲ್ಲಿ ಮೂಂಚ್. ಅದು ಸ್ತ್ರೀಲಿಂಗ ಶಬ್ದವಾಗಿರುವುದನ್ನು ನೋಡಿದರೆ ಹೊಸಬರು ಮಾತನಾಡುವಾಗ ಮಾಡಬಹುದಾದ ತಪ್ಪುಗಳ ಅಗಾಧತೆ ಅರ್ಥವಾಗುತ್ತದೆ. ಮಾತನಾಡುವ ಕಾರ್ಯ ಹೇಗಾದರೂ ನಡೆಯುತ್ತದೆ ಎನ್ನೋಣ. ಬರಹದ ಕಾರ್ಯ ಮಾತ್ರ ವ್ಯಾಕರಣಜ್ಞಾನವಿಲ್ಲದೆ ನಡೆಯಲಾಗದು. ಕನ್ನಡ ಭಾಷೆಯ ಬಗ್ಗೆ ಹೆಚ್ಚು ತಿಳಿಯಬೇಕಾದರೆ ವ್ಯಾಕರಣದ ಎಲ್ಲ ಅಂಶಗಳನ್ನೂ ತಿಳಿದುಕೊಳ್ಳಬೇಕು. ಆಗಲೇ ಭಾಷೆಯ ಜಾಯಮಾನವು ಮನದಟ್ಟಾಗುತ್ತದೆ. ಪ್ರತಿಯೊಂದು ಭಾಷೆಗೂ ತನ್ನದೇ ಆದ ಜಾಯಮಾನವಿರುತ್ತದೆ. ಅನುವಾದ ಮಾಡುವ ಸಂದರ್ಭದಲ್ಲಿ ಈ ಅಂಶವು ಖಚಿತ ಸ್ವರೂಪದಲ್ಲಿ ಗೊತ್ತಾಗುತ್ತದೆ. ಅನುವಾದ ಮಾಡುವವರಿಗೆ ತಮ್ಮ ಸ್ವಂತ ಭಾಷೆಯ ಬಗ್ಗೆ ಪ್ರಭುತ್ವವಿರಬೇಕು. ಯಾವ ಭಾಷೆಯಿಂದ ಅನುವಾದ ಮಾಡುತ್ತಾರೋ ಆ ಭಾಷೆಯ ಬಗ್ಗೆ ಇರುವ ಪ್ರಭುತ್ವಕ್ಕಿಂತ ಸ್ವಂತ ಆ ಭಾಷೆಯ ಮೇಲೆ ಹೆಚ್ಚಾಗಿ ಇರಬೇಕು. ಆಗಲೇ ಅನುವಾದ ಯಶಸ್ವಿಯಾಗುವುದು. ಇಲ್ಲವಿದ್ದರೆ ವಾಕ್ಯಕ್ಕೆ ವಾಕ್ಯ, ಶಬ್ದಕ್ಕೆ ಶಬ್ದ ಹಾಕಿ ಅನುವಾದ ಆಯಿತು ಎನ್ನುವಂತಾಗುತ್ತವೆ. ಅದನ್ನು ಓದುವವರಿಗೆ ಅರ್ಥವಾಗುವಂತಿರುವುದಿಲ್ಲ.

## 4.2 ಆಖ್ಯಾತ ಪ್ರಕರಣ

ಕೇಶಿರಾಜನು ಕ್ರಿಯಾಪದದ ಸ್ವರೂಪವನ್ನೂ, ಪ್ರಯೋಗಗಳನ್ನೂ ವಿಶದಪಡಿಸುವ ಈ ಅಧ್ಯಾಯವನ್ನು ಆಖ್ಯಾತ ಪ್ರಕರಣವೆಂದು ಕರೆದಿದ್ದಾರೆ. ಕ್ರಿಯಾಪದದ ಧಾತುವಿನ ಮೇಲೆ ಹತ್ತುವ ಪ್ರತ್ಯಯಗಳಿಗೆ ಆಖ್ಯಾತಗಳೆಂದು ಹೆಸರು, ನಾಮಪ್ರಕರಣದಲ್ಲಿ ಹೇಳಿದಂತೆಯೇ ಇಲ್ಲಿಯೂ ಒಂದು ಸೂತ್ರವನ್ನು ಹೇಳಿದ್ದಾನೆ.

**ಕ್ರಿಯೆಯರ್ಥದ ಮೂಲಂ ಪ್ರ**
**ತ್ಯಯ ರಹಿತಂ ಧಾತುವದನಭಾವಕ್ರಿಯೆಯೊಳ್**
**ನಿಯತಂ ನಿಶ್ಚಯಿಪುದು ಬುಧ**
**ಚಯಮಾ ಧಾತುಗೆ ವಿಭಕ್ತಿಯಾಖ್ಯಾಗಿರ್ಕುಂ.**

ಕ್ರಿಯೆಯು ಅರ್ಥದ ಮೂಲ. ಅದು ಪ್ರತ್ಯಯರಹಿತವಾದುದು. ಅದನ್ನು ಧಾತು ಎಂದು ಕರೆಯುತ್ತಾರೆ. ಅಭಾವ ಕ್ರಿಯೆಯನ್ನು ಎಂದರೆ ನಿಷೇಧಾರ್ಥಕ ರೂಪವನ್ನು ಕಳೆದರೆ ಧಾತು ಉಳಿಯುತ್ತದೆ. ಧಾತುವಿನ ಮೇಲೆ ಆರು ಆಖ್ಯಾತ ವಿಭಕ್ತಿಗಳು ಹತ್ತುತ್ತವೆ.

### 4.2.0 ಆಖ್ಯಾತ ಶಬ್ದ ನಿಷ್ಪತ್ತಿ

ಆಖ್ಯಾತ ಎಂಬುದು 'ಆಖ್ಯಾ' ಎಂಬ ಶಬ್ದದಿಂದ ವಿಕಾಸಗೊಂಡಿದೆ. ಆಖ್ಯಾ ಎಂದರೆ ಹೆಸರು ಎಂದು ಅರ್ಥ. ನಿಘಂಟುವಿನಲ್ಲಿ ಪ್ರಸಿದ್ಧವಾದ ಗಣ್ಯವಾದ ಎಂಬ ಅರ್ಥಗಳಿವೆ. ಯಾವ ಕ್ರಿಯೆಯನ್ನೇ ಆಗಲಿ ವಸ್ತುವಿಲ್ಲದೆ ಊಹಿಸಿಕೊಳ್ಳಲಾಗದು. ವಸ್ತು ಮತ್ತು ಕ್ರಿಯೆಗಳು ನಿಕಟ ಸಂಬಂಧ ಹೊಂದಿರುತ್ತವೆ. ವಸ್ತುವಿಗೆ ಸಂಬಂಧಿಸಿದಂತೆ ಪುರುಷ, ವಚನ, ಲಿಂಗಗಳಲ್ಲಿ ಕ್ರಿಯೆಯನ್ನು ತಿಳಿಸುವ ಪದ ಬೇರೆ ಬೇರೆ ರೂಪಗಳನ್ನು ಹೊಂದುವುದರಿಂದ ಅದು ಆಖ್ಯಾತ ಎನ್ನಿಸಿಕೊಳ್ಳುತ್ತದೆ.

### 4.2.1 ನಿಷೇಧಾರ್ಥಕದಿಂದ ಧಾತು ನಿರ್ಣಯ

ನಾಮಪದದ ಮೂಲಾಂಶವನ್ನು ನಾಮಪ್ರಕೃತಿ ಎಂದು ಕರೆಯುವ ಹಾಗೆ ಕ್ರಿಯಾಪದದ ಮೂಲಾಂಶಗಳನ್ನು ಕ್ರಿಯಾಪ್ರಕೃತಿ ಎಂದು ಕರೆಯಬಹುದು. ಧಾತುವನ್ನು ಗುರುತಿಸಲು ನಿಷೇಧಾರ್ಥಕ (ಅಥವಾ ಪ್ರತಿಷೇಧಾರ್ಥಕ) ರೂಪವನ್ನು ಆಯ್ದುಕೊಳ್ಳಬೇಕು.

ಮಾಡಿದನ್ ಎಂಬುದು ಒಂದು ಸಾಮಾನ್ಯಾರ್ಥಕ ಕ್ರಿಯಾಪದ. ಅದರ ನಿಷೇಧಾರ್ಥಕ ರೂಪವೆಂದರೆ ಮಾಡನ್ ಎಂಬುದು. ಕೇಶಿರಾಜ ಮಾಡಂ ಎಂದು ಹೇಳುತ್ತಾನೆ. ಏಕೆಂದರೆ ಆತನ ದೃಷ್ಟಿಯಲ್ಲಿ ಅಂ ಎಂಬುದು ಸರಿಯಾದ ಪ್ರತ್ಯಯ. ಆದರೆ ಮಾಡನ್ ಎಂಬುದು ಸಹಜವಾಗಿರುವಂತೆ ತೋರುತ್ತದೆ. ಬರೆಯುವಾಗ ಮಾಡಂ ಎಂದು ಬರೆದರೂ ಓದುವಾಗ ಮಾಡನ್ ಎಂದು ಓದಬೇಕಾಗುತ್ತದೆ. ಆಧುನಿಕ ಕಾಲದಲ್ಲಿ ಸ್ವರಾಂತವಾಗುವುದರಿಂದ ಮಾಡನು ಎಂದಾಗುತ್ತದೆ. ಅಂದಮೇಲೆ ಮಾಡನ್ ಎಂಬುದೇ ಸರಿಯಾದ ರೂಪವಾಗಿರಬೇಕು. ಮಾಡನ್ ಎಂಬುದನ್ನು ಬಿಡಿಸಿದರೆ ಮಾಡು + ಅಂ ಎಂದಾಗುತ್ತದೆಂದು ಕೇಶಿರಾಜನ ಅಭಿಪ್ರಾಯ. 'ಅಂ' ಎಂಬುದನ್ನು ಕಳೆದರೆ ಮಾಡು ಎಂಬ ಧಾತುವಾಗುತ್ತದೆಂದು ತಿಳಿಸಿದ್ದಾನೆ. ಆಧುನಿಕರು ಮಾಡನ್ ಎಂಬುದರಲ್ಲಿ ಅನ್ ಕಳೆದರೆ ಮಾಡ ಎಂದು ಉಳಿಯುವುದಿಲ್ಲವೆ ಎನ್ನುತ್ತಾರೆ. ಕೆಲವು ಪ್ರತಿಷೇಧಾರ್ಥಕಗಳನ್ನು ಇಲ್ಲಿ ನೋಡಬಹುದು.

| ಕ್ರಿಯಾಪದ | ಪ್ರತಿಷೇಧಾರ್ಥಕ | ಧಾತು |
|---|---|---|
| ಕೂಡಿದಂ | ಕೂಡಂ | ಕೂಡು |
| ನೋಡಿದಂ | ನೋಡಂ | ನೋಡು |
| ತೀಡಿದಂ | ತೀಡಂ | ತೀಡು |
| ನಿಲ್ವಂ | ನಿಲ್ಲಂ | ನಿಲ್ಲು (ನಿಲ್) |
| ಉಣ್ಬಂ | ಉಣ್ಣಂ | ಉಣ್ಣು (ಉಣ್) |

ಮೇಲಿನ ಉದಾಹರಣೆಗಳನ್ನು ನೋಡಿದರೆ ಕೂಡು, ನೋಡು ಎಂಬ ಉಕಾರಾಂತವನ್ನು ವಿವರಿಸುವುದು ಹೇಗೆ ಎಂಬ ಪ್ರಶ್ನೆ ಹುಟ್ಟುತ್ತದೆ. ಅಕಾರಾಂತ ನಿಷೇಧಾರ್ಥಕಗಳೂ ಬಳಕೆಯಲ್ಲಿವೆ. ತಿನ್ನ, ಕೊಡ, ನೋಡ ಮುಂತಾದವುಗಳನ್ನು ಗಮನಿಸಬಹುದು. ಕೇಶಿರಾಜನು ತನ್ನ ಸೂತ್ರ ೨೪೧ ರಲ್ಲಿ ಹೀಗೆ ಹೇಳಿದ್ದಾನೆ. ಪರಿಣಮಿಸಿರ್ಕುಂ ಪ್ರಕೃತಿ ಸ್ವರೂಪ ಮಧ್ಯಮೈಕ ವಚನಂ ವಿಧಿಯೋಳ್'. ವಿಧ್ಯರ್ಥಕ ಕ್ರಿಯಾಪದ ಪ್ರಯೋಗದಲ್ಲಿ ಮಧ್ಯಮ ಪುರು ಏಕವಚನದಲ್ಲಿ ಬಹುತೇಕ ಕ್ರಿಯಾಧಾತುವೇ ಬರುತ್ತದೆ.

### 4.2.2 ಆರು ಆಖ್ಯಾತ ಪ್ರತ್ಯಯಗಳು

ಕೇಶಿರಾಜನು ಆರು ವಿಭಕ್ತಿಗಳು ಧಾತುವಿನ ಮೇಲೆ ಸೇರುವುವು ಎಂದು ತಿಳಿಸಿದ್ದಾನೆ. ಇವುಗಳೇ ಆಖ್ಯಾತ ವಿಭಕ್ತಿ ಪ್ರತ್ಯಯಗಳು, ಇವುಗಳನ್ನು ಪುರುಷವಾಚಕ ಪ್ರತ್ಯಯಗಳೆಂದೂ ಕರೆಯಲಾಗುತ್ತದೆ. ಕೇಶಿರಾಜನು ನಾಮ ಪ್ರಕರಣದಲ್ಲಿ 'ನಾಮ ವಿಭಕ್ತಿ'ಗಳು ಎಂದು ಕರೆದಿರುವಂತೆ ಇವುಗಳನ್ನು 'ಕ್ರಿಯಾ ವಿಭಕ್ತಿ'ಗಳು ಎಂದು ಕರೆಯಬಹುದು. ಸಾಮಾನ್ಯ ಕ್ರಿಯಾಪದದಲ್ಲಿ ಧಾತುವಿನ ತರುವಾಯ ಕಾಲಸೂಚಕ ಪ್ರತ್ಯಯ ಮತ್ತು ಅನಂತರ ಆಖ್ಯಾತ ಪ್ರತ್ಯಯ ಬರುತ್ತವೆ. ಕೇಶಿರಾಜನು ನಿಷೇಧಾರ್ಥಕ ಕ್ರಿಯಾಪದವನ್ನು ಅವಲಂಬಿಸಿ ಧಾತುವಿನ ಸ್ವರೂಪ ನಿರ್ಣಯ ಮಾಡಲು ಪ್ರಾರಂಭಿಸಿದುದರಿಂದ ಕಾಲಸೂಚಕ ಪ್ರತ್ಯಯಗಳ ವಿಚಾರವನ್ನು ಮುಂದೂಡಿದ್ದಾನೆ.

ಸೂತ್ರ ೨೨೬ ರಲ್ಲಿ ಕೇಶಿರಾಜನು ಆಖ್ಯಾತ ಪ್ರತ್ಯಯಗಳನ್ನು ತಿಳಿಸಿದ್ದಾನೆ. ಏಕವಚನ, ಬಹುವಚನ ರೀತಿಯಲ್ಲಿ ಅವುಗಳು 'ಅಮ್, ಅಯ್, ಎನ್; ಅರ್, ಇರ್, ಎವು' ಆಗಿವೆ. ಈ ಸಂದರ್ಭದಲ್ಲಿ ಇನ್ನೊಂದು ಅಂಶವನ್ನು ಆತನು ತಿಳಿಸಿಲ್ಲ. ಅದೇನೆಂದರೆ ಪ್ರಥಮ ಪುರುಷ ಸ್ತ್ರೀಲಿಂಗ ಏಕವಚನದ ಪ್ರತ್ಯಯ 'ಅಳ್' ಎಂಬುದನ್ನು ; ನಪುಂಸಕ ಲಿಂಗ ಏಕವಚನದ ಪ್ರತ್ಯಯ 'ಉದು' ಮತ್ತು ಅದರದೇ ಬಹುವಚನದ ಪ್ರತ್ಯಯ 'ಉವು' ಎಂಬುವನ್ನು ಸೂತ್ರದಲ್ಲಿ ತಿಳಿಸಿಲ್ಲ. ಈ ವಿಷಯವನ್ನು ಮುಂದೆ ತಿಳಿಸಿದ್ದಾನೆ.

ನಾಮ ಪ್ರಕೃತಿಗಳ ಮೇಲೆ ಏಳು ವಿಭಕ್ತಿ ಪ್ರತ್ಯಯಗಳು ಹತ್ತಿ ನಾಮಪದಗಳಾಗುವಂತೆ, ಮೇಲೆ ಹೇಳಲಾದ ಆರು ಆಖ್ಯಾತ ಪ್ರತ್ಯಯಗಳು ಧಾತುವಿನ ಅಂತ್ಯದಲ್ಲಿ ಹತ್ತಿ ಪ್ರಥಮ ಪುರುಷ ಮಧ್ಯಮ ಪುರುಷ, ಉತ್ತಮ ಪುರುಷಗಳ ಏಕ ಮತ್ತು ಬಹು ವಚನಗಳಿಗೆ ಸೇರಿದ ಕ್ರಿಯಾ ರೂಪಗಳಾಗುತ್ತವೆ.

- 'ಅಂ' ಪ್ರತ್ಯಯ ಸೇರ್ಪಡೆಗೆ :

  ಎಸೆದಂ, ಒಸೆದಂ, ಬಗೆದಂ, ನಡೆದಂ..................[ಏಕವಚನ, ಪ್ರಥಮಪುರುಷ]

- ಅರ್ ಪ್ರತ್ಯಯ ಸೇರ್ಪಡೆಗೆ :

  ಆಡಿದರ್, ಪಾಡಿದರ್, ಕಟ್ಟಿದರ್, ಮೆಟ್ಟಿದರ್.............[ಬಹುವಚನ ಪ್ರಥಮಪುರುಷ]

- ಅಯ್ ಪ್ರತ್ಯಯಕ್ಕೆ :

  ನೋಡಿದಯ್, ತೆಗೆದಯ್, ಪೊರ್ದಿದಯ್............[ಏಕವಚನ ಮಧ್ಯಮಪುರುಷ]

- ಇರ್ ಪ್ರತ್ಯಯಕ್ಕೆ :

  ಪೊರ್ದುವಿರ್, ತಿರ್ದುವಿರ್, ಏಳಿಪಿರ್.............[ಬಹುವಚನ ಮಧ್ಯಮಪುರುಷ]

- ಎನ್ ಪ್ರತ್ಯಯಕ್ಕೆ :

  ನಿಮಿರ್ಚಿದೆಂ [ನ್], ಒಡರ್ಚಿದೆಂ [ನ್], ಬಣ್ಣಿಪೆಂ [ನ್]........[ಏಕವಚನ ಉತ್ತಮಪುರುಷ]

- ಎವು ಪ್ರತ್ಯಯಕ್ಕೆ :

  ಕಂಡೆವು, ಕೇಳ್ದೆವು, ಉಸಿರ್ದೆವು.................[ಬಹುವಚನ ಉತ್ತಮಪುರುಷ]

- ಎಸೆದಳ್, ಒಸೆದಳ್, ಪಾಡಿದಳ್............[ಏಕವಚನ, ಪ್ರಥಮ, ಸ್ತ್ರೀಲಿಂಗ]
- ಪರೆದುದು, ಕರೆದುದು, ನೆರೆದುದು.............[ಏಕ, ಪ್ರಥಮ, ನಪ್‌ವಾಚಿ]
- ಪೊರೆದುವು, ನಿಮಿರ್ದುವು.............[ಬಹು, ಪ್ರಥಮ, ನಪ್‌ವಾಚಿ]
- ಮುಟ್ಟಿತು, ಮೆಟ್ಟಿತು [ಇತು ಪ್ರತ್ಯಯ; ಏಕ, ಪ್ರಥಮ, ನಪ್‌ವಾಚಿ

- ಅಲ್ಲಾಡಿತ್ತು, ಓಡಿತ್ತು [ಇತು ಪ್ರತ್ಯಯ, ಏಕ, ಪ್ರಥಮ, ನಪ್‌ವಾಚಿ]
- ಇರ್ದತ್ತು ಪಸರಿಸಿದತ್ತು [ಅತ್ತು ಪ್ರತ್ಯಯ, ಏಕ, ಪ್ರಥಮ, ನಪ್‌ವಾಚಿ]
- ಕೇಶೀರಾಜನು ೨೩೮ನೇ ಸೂತ್ರದಲ್ಲಿ ಕೆಲವು ವಿಶೇಷ ಪ್ರಯೋಗಗಳನ್ನು ತಿಳಿಸಿದ್ದಾನೆ. ಅವುಗಳು ಸಾಧಾರಣವಾಗಿ ವರ್ತಮಾನ ಮತ್ತು ಭವಿಷ್ಯತ್ ಕಾಲಕ್ಕೆ ಬಳಕೆಯಾಗಿರುವ ಗುಂ ಮತ್ತು ಕುಂ ಪ್ರತ್ಯಯಗಳು. ಪ್ರಥಮ ಪುರುಷದಲ್ಲಿ ಭೂತಕಾಲಕ್ಕೂ ಬರುತ್ತವೆ. ಅವುಗಳು ಮೂರು ಲಿಂಗಗಳಿಗೂ ಮೂರು ವಚನ [ಎರಡು ವಚನ] ಗಳಿಗೂ ಅನ್ವಯವಾಗುತ್ತವೆ ಎಂದಿದ್ದಾನೆ. ಇವುಗಳು ಪ್ರಥಮ ಪುರುಷಕ್ಕೆ ಅನ್ವಯವಾಗುತ್ತವೆಂಬುದು ಮುಖ್ಯವಾದುದು.
- ಕಾಲತ್ರಯ (ಮೂರು ಕಾಲಗಳಿಗೆ)

  ಎಮಗೀಗಳೆ ಸೂಚಿಸುಗುಂ [ವರ್ತಮಾನಕಾಲ]; ಅಂದು ಮಾಡುಗುಂ, ಅಂದು ಮಾಟ್ಕುಂ [ಭೂತಕಾಲ]; ಅವರ್ ನಾಳೆ ಕಾಣ್ಗುಂ (ಭವಿಷ್ಯತ್)
- ಲಿಂಗತ್ರಯ [ಮೂರು ಲಿಂಗಗಳಿಗೆ]

  ಭೂವಳಯಾಧಿಪಂ ನುಡಿಗುಂ (ಪುಂ); ತಳೋದರಿ ಬಿಸುಸುಯ್ಗುಂ (ಸ್ತ್ರೀ) ಕೋಗಿಲೆಯುಲಿಗುಂ, ಗಂಧವಾಹ ಬೀಸುಗುಂ (ನಪ್)
- ವಚನತ್ರಯಕ್ಕೆ (ನಿಜವಾಗಿ ಎರಡು ವಚನ)

  ಒರ್ವನೆ ಗೆಲ್ಗುಂ (ಏಕ); ಕೃಷ್ಣಬಲರಾಮರ್ ನುಡಿಗುಂ (ದ್ವಿವಚನ)

  'ಕುಂ' ಪ್ರತ್ಯಯ ಪ್ರಯೋಗದಲ್ಲಿ 'ಪೋಕುಂ, ಇರ್ಕುಂ, ಬರ್ಕುಂ....' ಮುಂತಾದುವು ಬರುತ್ತವೆ.

  ಗುಂ, ಕುಂ ಪ್ರತ್ಯಯಗಳನ್ನು ಕಾಲತ್ರಯ,ಲಿಂಗತ್ರಯ ಮತ್ತು ವಚನತ್ರಯ (ಎರಡು ಎನ್ನಿ) ಎಲ್ಲಕ್ಕೂ ಬಳಸುವುದಾದರೆ ಕ್ರಿಯಾಪದದ ವಿಚಾರವೇ ತುಂಬಾ ಸರಳವಾಗುತ್ತದೆ. ಇದು ಮೂಲದ್ರಾವಿಡದಲ್ಲಿ ಇತ್ತೆಂದು ತೋರುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯ.

  ಸೂತ್ರ ೨೩೦ ರಲ್ಲಿ ಹೇಳಿರುವಂತೆ ಆಖ್ಯಾತ ಪ್ರತ್ಯಯಗಳು ಧಾತುವಿನ ಮೇಲೆ ಮಾತ್ರ ಬರುವುದರ ಜೊತೆಗೆ ಸಂಖ್ಯಾವಾಚಕ, ಸರ್ವನಾಮ ಗುಣವಚನಗಳ ಮೇಲೂ ಬರುವುದೆಂದು ತಿಳಿಯಬೇಕು.
- ಸಂಖ್ಯಾವಾಚಕಕ್ಕೆ :

  ಒರ್ + ಅನ್= ಒರ್ವನ್, ಒರ್ವರ್ , ಒರ್ವಯ್, ಒರ್+ ಇರ್= ಒರ್ವಿರ್, ಒರ್ವನೆನ್, ಒರ್ವೆವು

- ಸರ್ವನಾಮಕ್ಕೆ : ಪೆಜಂ, ಪೆಜರ್, ಪೆಜಯ್, ಪೆಜಿರ್, ಪೆಜನೆನ್, ಪೆಜೆವು

- ಗುಣವಾಚಕಕ್ಕೆ : ಒಳ್ಳಿದಂ, ಒಳ್ಳಿದರ್, ಒಳ್ಳಿದಯ್, ಒಳ್ಳಿದಿರ್, ಒಳ್ಳಿದೆಂ, ಒಳ್ಳಿದೆವು

ಇವುಗಳಲ್ಲದೆ ಮತ್ತೊಂದು ವಿಶೇಷವೂ ಇದೆ. ಅನ್ವರ್ಥನಾಮಗಳ ಮೇಲೂ ಈ ಆಖ್ಯಾತ ಪ್ರತ್ಯಯಗಳು ಹತ್ತುತ್ತವೆ ಎಂಬುದು ಮಹತ್ವದ ವಿಚಾರ. ಕೇಶಿರಾಜನೇ ಸ್ವತಃ 'ಕವಿ ಕೇಶವನೆನ್' ಎಂದು ಹೇಳಿಕೊಂಡಿದ್ದಾನೆ.

### 4.2.3 ಕಾಲವಾಚಕ ಹಾಗೂ ಆಖ್ಯಾತ ಪ್ರತ್ಯಯಗಳು

ಕಾಲವಾಚಕ ಪ್ರತ್ಯಯಗಳು ಧಾತುವಿಗೆ ಹತ್ತುವುದರಿಂದ ಅರ್ಥಸ್ಪಷ್ಟತೆ ಉಂಟಾಗುತ್ತದೆ. ದ, ದಪ, ವ ಎಂಬ ಪ್ರತ್ಯಯಗಳು ಕ್ರಮವಾಗಿ ಭೂತಕಾಲ, ವರ್ತಮಾನಕಾಲ, ಮತ್ತು ಭವಿಷ್ಯತ್‌ಕಾಲಗಳನ್ನು ಸೂಚಿಸುತ್ತವೆ. ಇವುಗಳು ಆಖ್ಯಾತ ಪ್ರತ್ಯಯಗಳಿಗಿಂತ ಮೊದಲು ಹತ್ತುತ್ತವೆ.

- **ಭೂತಕಾಲ :**

  ಪಡೆ + ದ+ ಅಂ = ಪಡೆದಂ , ಇಡಿದರ್, ಗೆಲ್ದರ್; ತೂಗು + ಇ +ದ+ಅಂ=ತೂಗಿದಂ [ತೂಗು ಎಂಬುದು ಉಕಾರಾಂತ ಶಬ್ದ' ಇದಕ್ಕೆ 'ದ' ಸೇರುವ ಮೊದಲು 'ಇ' ಕಾರಾಗಮ ವಾಗುತ್ತದೆ.]

- **ವರ್ತಮಾನ ಕಾಲ :**

  ಪಡೆ +ದಪ+ಅಂ= ಪಡೆದಪಂ, ಇಡಿದಪಂ, ಗೆಲ್ದಪಂ;

  ಎತ್ತು +ಇ+ದಪ+ಅಂ=ಎತ್ತಿದಪಂ [ಉಕಾರಾಂತ ಶಬ್ದಕ್ಕೆ 'ಇ' ಕಾರಾಗಮ]ಒತ್ತಿದಪಂ, ಬೇಡದಪಂ,

- **ಭವಿಷ್ಯತ್ಕಾಲಕ್ಕೆ :**

  ಕುಡು+ವ+ಅಂ= ಕುಡುವಂ, ಪಡೆ+ವ-ಉ =ಪಡೆವಂ, ಬಿಗಿ +ವ +ಅಂ=ಬಿಗಿವಂ, ತುಮುಟ್ +ವ+ಅಂ=ತುಮುಟ್ವಂ

  ಮೇಲೆ ಹೇಳಲಾದ ನಿಯಮಗಳ ಹಾಗೆಯೇ ಬಹುವಚನ ರೂಪಗಳು ಸಿದ್ಧಿಸುತ್ತವೆ.

  ಪಡೆದರ್, ಪಡೆದಪರ್, ಎತ್ತಿದಪರ್, ಕುಡುವರ್ ಇತ್ಯಾದಿ.

  ನಿಷೇಧಾರ್ಥದಲ್ಲಿ ಕಾಲವಾಚಕ ಪ್ರತ್ಯಯಗಳಿಗೆ ಸ್ಥಾನವಿಲ್ಲವೆಂಬುದನ್ನು ಕೇಶಿರಾಜನು ತಿಳಿಸುತ್ತಾನೆ.

  ಭೂತಕಾಲದ 'ಮಾಡಿದರ್' ಎಂಬುದು ನಿಷೇಧಾರ್ಥದಲ್ಲಿ 'ಮಾಡಂ' ವರ್ತಮಾನದ 'ಮಾಡಿದಪಂ' ಎಂಬುದೂ 'ಮಾಡಂ'. ಭವಿಷ್ಯತ್ಕಾಲದ 'ಮಾಡುವಂ' ಎಂಬುದೂ 'ಮಾಡಂ'.

  ಇದೇ ರೀತಿ ಮಧ್ಯಮ ಪುರುಷ ಮತ್ತು ಉತ್ತಮ ಪುರುಷಗಳಲ್ಲಿಯೂ ಸಿದ್ಧಿಸುತ್ತವೆ.

### 4.2.4 ಭೂತಕಾಲ ಮತ್ತು ವರ್ತಮಾನ ಕ್ರಿಯಾಪದಗಳು :

ವರ್ತಮಾನದ ದಪ ಎಂಬುದು 'ದಪ್ಪ' ಎಂದೂ ಆಗುತ್ತದೆ. ಬರೆ +ದ/ದಪ/ದಪ್ಪ+ಅಂ=ಬರೆದಪಂ / ಬರೆದಪ್ಪಂ; ಸಿಲಿಸು +/ದಪ/ದಪ್ಪ +ಅಂ =ಸಿಲಿಸಿದಪಂ / ಸಿಲಿಸಿದಪ್ಪಂ.

**ಅನುನಾಸಿಕ ಬಂದಿರುವುದಕ್ಕೆ :**

ಮೀ + ದ / ದಪ + ಅಂ = ಮಿಂದಂ / ಮಿಂದಪಂ

ತರ್ +ದ / ದಪ + ಅಂ = ತಂದಂ / ತಂದಪಂ

ಕೊಲ್ + ದ / ದಪ +ಅಂ =ಕೊಂದಂ / ಕೊಂದಪಂ

ನೋ + ದ/ ದಪ +ಅಂ = ನೊಂದಂ / ನೊಂದಪಂ

ಬೇ + ದ/ ದಪ +ಅಂ = ಬೆಂದಂ / ಬೆಂದಪಂ

- ಧಾತುವಿನ ಆದಿಯ ಇಕಾರುಕಾರಗಳು ಎಕಾರ ಒಕಾರಗಳಾಗುವುದಕ್ಕೆ :

ಬಿಸು + ದ / ದಪ + ಅಂ =ಬೆಚ್ಚಂ /ಬೆಚ್ಚಪಂ ; ಉಗು + ದ / ದಪ +ಅಂ =ಒಕ್ಕಂ / ಒಕ್ಕಪಂ. ನಡು +ದ / ದಪ + ಅಂ =ನಟ್ಟಂ / ನಟ್ಟಪಂ; ಕುಡು +ದ / ದಪ +ಅಂ =ಕೊಟ್ಟಂ / ಕೊಟ್ಟಪಂ ಮೇಲಿನ ಉದಾಹರಣೆಗಳಲ್ಲಿ ಸುಕಾರಾಂತ ಧಾತುಗೆ ಚಕಾರ ಆದೇಶವಾಗಿರುವುದನ್ನು, ಡ ಕಾರಾಂತಧಾತುಗೆ ಟಕಾರ ಆದೇಶವಾಗಿರುವುದನ್ನೂ ಗ ಕಾರಾಂತ ಧಾತುಗೆ ಕಕಾರ ಆದೇಶವಾಗಿರುವುದನ್ನು, ನೋಡಬಹುದು. ಅದೇ ರೀತಿಯಲ್ಲಿ ಱ ಕಾರಕ್ಕೆ ತ ಕಾರ ಆದೇಶವಾಗಿರುವುದನ್ನು, ಣ ಕಾರಕ್ಕೆ ಡಕಾರ ಆದೇಶವಾಗುವುದನ್ನು ಕಾಣಬಹುದು.

ಪೆಱು + ದ / ದಪ + ಅಂ = ಪೆತ್ತಂ / ಪೆತ್ತಪಂ ; ಉಣ್+ದ /ದಪ+ಅಂ=ಉಂಡಂ/ ಉಂಡಪಂ

- **ಸತಿ ಸಪ್ತಮಿ**

ಕೆಲವು ಸಲ ಒಂದು ಕ್ರಿಯೆಯು ಪೂರ್ಣವಾಗದೆ ಹಾಗೆಯೇ ಉಳಿದರೆ ಏನಾಗುತ್ತದೆಂಬುದನ್ನು ಕೇಶಿರಾಜನು ತಿಳಿಸಿದ್ದಾನೆ. ಭೂತಕಾಲಾರ್ಥದ ಅಪೂರ್ಣಕ್ರಿಯಾರೂಪದಲ್ಲಿ ಧಾತುವಿಗೆ ಇಕಾರ ಉಕಾರಗಳು ಬರುತ್ತವೆ. ವರ್ತಮಾನಾರ್ಥದ ಅಪೂರ್ಣ ಕ್ರಿಯಾರೂಪದಲ್ಲಿ ಧಾತುವಿಗೆ ಉತುಂ, ಉತ್ತುಂ, ಉತ್ತೆ, ಉತೆ ಎಂಬ ಪ್ರತ್ಯಯಗಳು ಸೇರುತ್ತವೆ.

**ಭೂತಕಾಲಕ್ಕೆ** : ಮೆಚ್ಚಿಪೊಗಟ್ಟಂ, ನಚ್ಚಿ ಬಂದಂ, ಕುಸಿದುನಡೆದಂ, ನೆನೆದು ಪೇಱ್ದಂ

**ವರ್ತಮಾನಕ್ಕೆ** : ಪುಗುತುಂ ಇರ್ದಪಂ; ಕುಡುತ್ತುಂ ಬಂದಂ; ಕೆತ್ತುತ್ತೆ ಕಡಿದಂ; ಎನ್ನುತ್ತೆ ನಿಂದಂ

ಮೇಲಿನ ಉದಾಹರಣೆಗಳಲ್ಲಿ ಎರಡು ಕ್ರಿಯೆಗಳು ನಡೆದಿರುವುದನ್ನು ಕಾಣುತ್ತೇವೆ. ಮೊದಲನೆಯ ಕ್ರಿಯೆಯು ಅಧೀನವಾಗಿಯೂ ಎರಡನೆಯ ಕ್ರಿಯೆಯು ಪ್ರಧಾನವಾಗಿಯೂ ವರ್ತಿಸುತ್ತವೆ. ಕರ್ತೃಮಾತ್ರ (ಒಬ್ಬರು) ಒಂದೇ ಆಗಿದೆ. ಇಂತಹುದೇ ಸ್ಥಿತಿಯಲ್ಲಿ ಕರ್ತೃಗಳು ಬೇರೆಬೇರೆಯಾದರೆ ಅಧೀನಕ್ರಿಯೆಯ ಮೇಲೆ ಹತ್ತುವ ಪ್ರತ್ಯಯಗಳು ಬೇರೆ ತರನಾಗಿರುತ್ತವೆ. ಅಂಥ

ಸಂದರ್ಭವನ್ನು ಸತಿಸಪ್ತಮಿ ಎಂದು ಹೇಳುತ್ತಾರೆ. ಅಧೀನ ಕ್ರಿಯೆಗೆ 'ಎ', 'ಅಲ್' 'ಅಲೊಡಂ' ಪ್ರತ್ಯಯಗಳು ಹತ್ತುತ್ತವೆ.

ಉದಾ : ಗಾಯಕಂ ಪಾಡೆ ದೇವ ಮೆಚ್ಚಿದಂ ; ವಂದಿಪೊಗಟಲ್ ಚಾಗಿ ಕೊಟ್ಟಂ ; ವಸಂತಂ ಬರಲೊಡಂ ಕೋಗಿಲೆಯುಲಿಗುಂ

ಸತಿಸಪ್ತಮಿಯನ್ನು ಕೇಶಿರಾಜನು ಸತ್ಯರ್ಥವೆಂದು ಕರೆಯುತ್ತಾನೆ. ಇದು ಸಂಸ್ಕೃತ ವ್ಯಾಕರಣದಿಂದ ಕನ್ನಡಕ್ಕೆ ಬಂದ ಶಬ್ದ. ಅಲ್ಲಿಗೂ ಇಲ್ಲಿಗೂ ವ್ಯತ್ಯಾಸವೂ ಇದೆ. ಉದಾ : ತಸ್ಮಿನ್ ಗತೇ ಕಿಂ ವೃತ್ತಮ್ ಎಂಬಲ್ಲಿ ಕರ್ತೃ ಪದವಾದ ತಸ್ಮಿನ್ ಎಂಬುದು ಸಪ್ತಮೀ ವಿಭಕ್ತಿಯಲ್ಲಿದೆ. ಕನ್ನಡದಲ್ಲಿ ಕರ್ತೃಪದ ಪ್ರಥಮಾ ವಿಭಕ್ತಿಯಲ್ಲಿಯೇ ಇದ್ದು ಕ್ರಿಯಾಪದಕ್ಕೆ 'ಎ' ಅಲ್, ಅಲೊಡಂ ಎಂಬುವು ಸೇರುತ್ತವೆ. 'ಎ' ಕಾರವೂ ಸಪ್ತಮೀ ಅರ್ಥವನ್ನು ಕೊಡುತ್ತದೆ.

## 4.3 ಧಾತು ಪ್ರಕರಣ

ಶಬ್ದ ಮಣಿ ದರ್ಪಣದಲ್ಲಿರುವ ಇತರ ಪ್ರಕರಣಗಳನ್ನು ಧಾತುಪ್ರಕರಣದ ಜೊತೆ ಹೋಲಿಸಿ ನೋಡಿದರೆ, ಧಾತು ಪ್ರಕರಣವು ಆಖ್ಯಾತ ಪ್ರಕರಣದ ಭಾಗವೇ ಆಗುವಂತೆ ಕಂಡುಬರುತ್ತದೆ. ಕೇಶಿರಾಜನು ಧಾತು ಪ್ರಕರಣದಲ್ಲಿ ಯಾವ ಚರ್ಚೆಯನ್ನೂ ಮಾಡಿಲ್ಲ. ಈ ಅಧ್ಯಾಯದಲ್ಲಿ ಕ್ರಿಯಾಪದಗಳ ಪಟ್ಟಿಯಿದೆ. ಸುಮಾರು 985 ಧಾತುಗಳು ಒಂದು ಗ್ರಂಥದಲ್ಲಿವೆ. ಇನ್ನೊಬ್ಬರು ಸಂಪಾದಿಸಿರುವ ಗ್ರಂಥದಲ್ಲಿ 1044 ಧಾತುಗಳಿವೆ. ಇನ್ನೊಬ್ಬರು 989 ಧಾತುಗಳನ್ನು ಸಂಕಲಿಸಿದ್ದಾರೆ. ಈ ಪಟ್ಟಿಯಲ್ಲಿರುವ ಧಾತುಗಳ ಪೈಕಿ ಮೂಲಧಾತುಗಳು ಕಡಿಮೆ ಸಂಖ್ಯೆಯಲ್ಲಿವೆ ಮತ್ತು ಸಾಧಿತ ಧಾತುಗಳು ಹೆಚ್ಚಾಗಿವೆ. ಕವಿಗಳು ಕೆಲವು ಧಾತುಗಳನ್ನು ಟಂಕಿಸಿ ಪ್ರಯೋಗಿಸುತ್ತಾರೆ. ಸಹಜಧಾತುಗಳು ಒಂದರಿಂದ ಮೂರು ಅಕ್ಷರಗಳಿಂದ ಕೂಡಿವೆ. ಅವುಗಳು :

ಈ, ಓ, ಉಗಿ, ಅಗಿ, ನಗು, ಸೂರುಳ್, ಹರಗು, ಮಲಗು..... ಇತ್ಯಾದಿ ಸಾಧಿತ ಧಾತುಗಳಲ್ಲಿಯೂ ಸಂಯುಕ್ತಧಾತುಗಳು, ಪ್ರತ್ಯಯಾಂತ ಧಾತುಗಳೆಂದು ಎರಡು ಬಗೆಯಾಗಿವೆ. ಸಂಯುಕ್ತಧಾತುಗಳು ಎಂದರೆ ಎರಡು ಭಿನ್ನಧಾತುಗಳು ಅಥವಾ ಎರಡು ಭಿನ್ನ ಅರ್ಥಘಟಕಗಳು ಕೂಡಿ ಹೊಸ ಅರ್ಥವನ್ನು ಕೊಡುವ ಧಾತುಗಳು, ಉದಾ : ಇಂಬುಕಯ್, ಎಯ್ತರು, ಅಟ್ಟಾಡು, ಅಪ್ಪುಕಯ್, ಉಬ್ಬಸಂಬಡು, ಗುಡಿಕಟ್ಟು, ಕಯ್ ವೀಸು, ಇವುಗಳಲ್ಲಿ ಕೆಲವು ಸಮಾಸಪದಗಳಾಗಿವೆ.

ಪ್ರತ್ಯಯಾಂತ ಧಾತುಗಳ ಪೈಕಿ ಇಸು ಪ್ರತ್ಯಯ ಸೇರಿ ಆಗಿರುವ ಧಾತುಗಳನ್ನು ನೋಡಬಹುದು. ಆಲಿಸು, ಕೊಕ್ಕರಿಸು, ನಿಟ್ಟಿಸು, ಮುಂತಾದವು ಒಂದು ಗುಂಪಾದರೆ, ಆಡಿಸು, ಪಾಡಿಸು, ಬರೆಯಿಸು ಇತ್ಯಾದಿಗಳು ಪ್ರೇರಣಾರ್ಥಕವಾಗಿವೆ. ಸಂಸ್ಕೃತದಿಂದ ಸ್ವೀಕೃತವಾದ ಶಬ್ದಗಳಿಗೂ ಇಸು ಪ್ರತ್ಯಯವನ್ನು ಸೇರಿಸಬಹುದು. ಚಿತ್ರಿಸು, ಭಾವಿಸು, ಶಿಕ್ಷಿಸು, ಯೋಜಿಸು, ಇತ್ಯಾದಿ. ತದ್ಭವ ಶಬ್ದಗಳಿಗೂ ಇಸು ಸೇರುತ್ತದೆ. ಬಿತ್ತರಿಸು, ಬಿನ್ನವಿಸು, ಇತ್ಯಾದಿ.

ಇದು ಎಂಬ ಪ್ರತ್ಯಯವು "ಚು"ಎಂಬ ರೂಪವನ್ನು ತಾಳಿ ಧಾತುವನ್ನು ಸೇರಿರುವುದನ್ನು ಕಾಣಬಹುದು. ಉದಾ:ಅಲರ್ಚು, ಉದಿರ್ಚು, ನೆಗಟ್ಚು ಇತ್ಯಾದಿ. ಸಾಧಿತ ಧಾತುಗಳನ್ನು ಸೃಷ್ಟಿಸಿಕೊಳ್ಳುವುದರಲ್ಲಿ ಕನ್ನಡ ಭಾಷೆಯು ಅಪೂರ್ವವಾದ ಕೌಶಲವನ್ನು ತೋರಿಸಿದೆ ಎಂದು ಹೇಳಬಹುದು.

ಕೇಶಿರಾಜನು ಧಾತುಗಳನ್ನು ಪಟ್ಟಿಮಾಡುವಾಗ ಕನ್ನಡದ ಅಕ್ಷರಾನುಕ್ರಮಣಿಕೆಯನ್ನು ಅನುಸರಿಸಿದ್ದಾನೆ. ಮೊದಲು ಸ್ವರಗಳಿಂದ ಅಂತ್ಯವಾಗುವ ಧಾತುಗಳು ನಂತರ ಕ ಕಾರದಿಂದ ಓಡಿದು ಳ ಕಾರದವರೆಗೆ ಅಂತ್ಯವಾಗುವ ಧಾತುಗಳನ್ನು ಪಟ್ಟಿಮಾಡಿದ್ದಾನೆ. ಉದಾಹರಣೆಗೆ

ಸ್ವರಾಂತ: ಈ, ಓ

ಇತರ ವರ್ಣಗಳಿಂದ ಅಂತ್ಯವಾಗುವ ಅಕ್ಷರಗಳು:

ಕಾಂತ: ಅಡುಕು, ಒಕ್ಕು, ಔಂಕು, ಕುಕ್ಕು, ಕೊಂಕು, ಚಲುಕು, ಜರ್ಕು, ತಳ್ಕು, ಬಿಕ್ಕು, ಬಿಕ್ಕು, ಮುಕ್ಕು, ಸಾಕು, ಹಲುಕು.........

ಗಾಂತ : ಅಗಿ, ಅಡಂಗು, ತಾಂಗು, ಬಾಗು, ಹೊಗೆ.......

ಚಾಂತ : ಅಲರ್ಚು, ಅಬಿಲ್ಚು, ತೀರ್ಚು, ಪಿಂಚು, ಹೊಂಚು.......

ಜಾಂತ : ಅಂಜು, ನಂಜು, ಪಿಂಜು, ಮಾಂಜು...........

ಟಾಂತ : ಅಟ್ಟು, ತಾಟು, ಪುಟ್ಟು, ಮೀಂಟು, ಸುರುಂಟು........

ಡಾಂತ : ಅಡು, ಕಿಡು, ಗಿಡಿ, ತೋಡು, ಬಡಿ, ಮುಡಿ.....

ಣಾಂತ : ಅಣೆ, ಪೂಣ್, ಮಣಿ, ಸೋಣೆ...........

ತಾಂತ : ಒತ್ತು, ಪತ್ತು, ಬತ್ತು, ಮುತ್ತು, ಸುತ್ತ..........

ದಾಂತ : ಉರ್ದು, ಕಾದು, ತಾಳ್ದು, ಪೊರ್ದು, ಹೊದೆ, ಹೊಂದು......

ನಾಂತ : ಆನ್, ತಿನ್, ನೋನ್, ಸೀನ್, ಹನಿ..........

ಪಾಂತ : ಕಪ್ಪು, ತಣಿಪು, ಸಲಪು, ಸೊಪ್ಪು........

ಬಾಂತ : ಅಂಬು, ಕೊರ್ಬು, ತಿಂಬು, ಪರ್ಬು...........

ಮಾಂತ : ಅಣ್ಮು, ಕಮ್ಮು, ಕೆಮ್ಮು, ನೆಮ್ಮು, ಹಮ್ಮು............

ಯಾಂತ : ಅಪ್ಪುಕಯ್, ಆರಯ್, ಕೊಯ್, ತೊಯ್, ನೆಯ್, ಸುಯ್......

ರಾಂತ : ಅದಿರ್, ಕೊರ್, ತಳರ್, ಪಾರ್, ಸುರಿ, ಹುರಿ.......

ಲಾಂತ : ಅಂಡಲೆ, ಉಲಿ, ಕುಕಿಲ್, ತಳಲ್, ಪುಯಲ್, ಸೋಲ್..........

ವಾಂತ : ಎಬಿವು, ಒದವು, ತಳ್ವು, ತಿವಿ, ಸವಿ, ಸೀವು........

ಸಾಂತ : ಅಡಸು, ಎಳಸು, ಕುಸಿ, ಪಾಸು, ಮಾಸು, ಸಸಿ, ಹುಸಿ......

ಇಸು ಸೇರಿದ ಸಂಸ್ಕೃತ ಧಾತು : ಅಭಿನಯಿಸು, ಚಿತ್ರಿಸು, ರಕ್ಷಿಸು, ವಂಚಿಸು, ಸೂತ್ರಿಸು..........

ಇಸು ಸೇರಿದ ಕನ್ನಡ ಧಾತು : ಅಕ್ಕುಳಿಸು, ಕುರ್ಗಿಸು, ಜಕ್ಕುಳಿಸು, ತಡವರಿಸು,

(ಸ್ವಯಂ ಕರ್ತೃಕ) ಬಿಕ್ಕುಳಿಸು, ಸಮನಿಸು, ಸೊಗಯಿಸು, ಹನಿಸು.........

ಇಸು -ಭಿನ್ನಕರ್ತೃಕ : ಅಟಿಯಿಸು, ಓದಿಸು, ಕಡಿಯಿಸು, ತೊಡೆಯಿಸು, ಪಾಡಿಸು, ಬರೆಯಿಸು, ಮುಳಿಯಿಸು.........

ಱಾಂತ : ಅಱಿ, ಎಡಱು, ಕೊಱೆ, ನಾಱು, ಪೊಱು, ಬೀಱು, ಸುಱಿ......

ೞಾಂತು : ಅಗೞ್, ಉೞಿ, ಎೞೆ, ತಗೞ್, ಪೊಗೞ್, ಬಾೞ್, ಹಿೞಿ.......

ಳಾಂತ : ಅಸುಂಗೊಳ್, ಕಳ್, ತಳಿ, ನುಸುಳ್, ಬಗುಳ್, ಮುಳ್, ಸೆಳೆ......

ಮೇಲೆ ನೋಡಿದ ಧಾತುಪಟ್ಟಿಯಲ್ಲಿ ಮಹಾಪ್ರಾಣಾಕ್ಷರಗಳಿಂದ ಅಂತ್ಯವಾಗುವ ಧಾತುಗಳನ್ನು ಕೊಟ್ಟಿಲ್ಲ, ಙ, ಞ ವರ್ಣಗಳಿಂದ ಅಂತ್ಯವಾಗುವ ಧಾತುಗಳನ್ನು ಕೊಡದಿರುವುದು ಆಶ್ಚರ್ಯವಲ್ಲ. ಆದರೆ ಮಹಾಪ್ರಾಣಾಕ್ಷರಗಳು ಕನ್ನಡದಲ್ಲಿ ಇವೆ ಎಂದು ಹೇಳಿದ ಕೇಶಿರಾಜನು ಅವುಗಳಿಂದ ಅಂತ್ಯವಾಗುವ ಧಾತುಗಳನ್ನು ಕೊಡದಿರುವುದು ಸ್ವಯಂವೇದ್ಯವಾದುದು. ಹಾಗೆಯೇ ಶ,ಷ ಗಳಿಂದ ಅಂತ್ಯವಾಗುವ ಧಾತುಗಳನ್ನೂ ಕೊಟ್ಟಿಲ್ಲ. ಱ, ೞ, ಗಳಿಂದ ಅಂತ್ಯವಾಗುವ ಧಾತುಗಳನ್ನು ಕೊಟ್ಟಿದ್ದಾನೆ.

## 4.4 ಅಪಭ್ರಂಶ ಪ್ರಕರಣ

**ಸಕ್ಕದದ ತದ್ಭವಂಗಳ**
**ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇೞ್ವೆಂ**
**ಸಕ್ಕದದ ಶಷದ್ವಿತಯ**
**ಕ್ಕಕ್ಕುಂ ಸತ್ವಂ ಪ್ರಸಿದ್ಧಿಯಿಂದೆಲ್ಲೆಡೆಯೊಳ್,**

ಕೇಶಿರಾಜನು ಅಪಭ್ರಂಶಪ್ರಕರಣದಲ್ಲಿ ತದ್ಬವ ಎಂಬ ಶಬ್ದವನ್ನು ಬಳಿಸಿದ್ದಾನೆ. ತದ್ಭವ = ತತ್‌ಭವ ಎಂಬ ಅರ್ಥದಲ್ಲಿ ಅವನು ಹೇಳಿದ್ದಾನೆ. ಅದು ಸಾಮಾನ್ಯಾರ್ಥವೇ ವಿನಾ ಬೇರೇನೂ ಅಲ್ಲ, ಏಕೆಂದರೆ ತದ್ಭವಗಳನ್ನು ಆತನು ಅಪಭ್ರಂಶ ಎಂದೇ ನಿರೂಪಿಸುತ್ತಾನೆ. ಈ ಅಧ್ಯಾಯದಲ್ಲಿ ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಬರುವಾಗ ರೂಪಾಂತರ ಹೊಂದುವುದನ್ನು ವಿವರಿಸುತ್ತಾನೆ. ಹಳಗನ್ನಡ ನಡುಗನ್ನಡ ಕಾವ್ಯಗಳಲ್ಲಿ ತದ್ಭವಗಳು ಬಳಕೆಯಾಗಿವೆ. ತದ್ಭವ ಎಂದು ಕರೆಯುವುದು ಅವನಿಗೆ ಇಷ್ಟವಿರಲಿಲ್ಲ. ಅಪಭ್ರಂಶ ಎಂದರೆ ವಿರೂಪಗೊಂಡದ್ದು. ಸಂಸ್ಕೃತದಿಂದ ವಿರೂಪಗೊಂಡು ಕನ್ನಡಕ್ಕೆ ಬಂದ ಶಬ್ದಗಳು. ಕೇಶಿರಾಜನು ಹೇಳುವ 'ತತ್ಸಮ'ಗಳು ಸ್ವಲ್ಪವೂ ವ್ಯತ್ಯಾಸಹೊಂದದೆ ಕನ್ನಡಕ್ಕೆ ನೇರವಾಗಿ ಬಂದಿವೆ. ಅವು ತುಂಬಾ ಕಡಿಮೆ ಸಮ ಸಂಸ್ಕೃತ ಶಬ್ದಗಳೇ ಕನ್ನಡದಲ್ಲಿ ತುಂಬ ಹೆಚ್ಚಾಗಿವೆ. ಹಾಗಾದರೆ ಇತರ ಸಂಸ್ಕೃತ ಶಬ್ದಗಳು ತುಂಬ ವ್ಯತ್ಯಾಸವನ್ನು ಹೊಂದಿ ಕನ್ನಡಕ್ಕೆ ಬರಬೇಕಾಯಿತು ಎಂಬುದು ಚಿಂತಿಸಬೇಕಾದ ಅಂಶವಾಗಿದೆ. ಎಷ್ಟೋ ಸಂಸ್ಕೃತ ಶಬ್ದಗಳು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದಿರುವುದುಂಟು.

ಅಪಭ್ರಂಶ ಎಂಬುದನ್ನು ತದ್ಭವಕ್ಕೆ ಪರ್ಯಾಯವಾಗಿ ನಾಗವರ್ಮನು ಬಳಸಿದ್ದಾನೆ. ಕೇಶಿರಾಜನು ಅನುಸರಿಸಿದ್ದಾನೆ. ಈ ಅಧ್ಯಾಯದಲ್ಲಿ ಸುಮಾರು 800ಕ್ಕೂ ಹೆಚ್ಚು ತದ್ಭವಗಳನ್ನು ಸಂಕಲಿಸಿದ್ದಾನೆ. ಕೇಶಿರಾಜನ ನಂತರವೂ ಕೂಡ ಕವಿಗಳು ತದ್ಭವಗಳನ್ನು ಟಂಕಿಸಿದ್ದಾರೆ. ಅವರಿಗೆ ಕೇಶಿರಾಜನು ಮಾರ್ಗದರ್ಶನ ಮಾಡಿದಂತಾಗಿದೆ. ಆಂಡಯ್ಯನಂತಹ ಕವಿಗಳಿಗೆ ತದ್ಭವಗಳೇ ಸರ್ವಸ್ವ.

ಅವು ಕನ್ನಡದ ಸ್ವತ್ತು ಎಂದು ಆತನು ಭಾವಿಸಿದ್ದನು. ಶಾಸ್ತ್ರಕಾರನು ಸಾಧಾರಣೀಕರಣದ ಕಡೆ ಆಸಕ್ತನಾಗಿರುತ್ತಾನೆ. ಸಾಮಾನ್ಯ ನಿಯಮಗಳನ್ನು ರೂಪಿಸಲು ಪ್ರಯತ್ನಿಸುತ್ತಾನೆ. ಆದರೆ ಎಷ್ಟೋ ಶಬ್ದಗಳು ನಿಯಮಕ್ಕೆ ಒಳಗಾಗದೆ ಉಳಿದುಬಿಡುತ್ತವೆ. ಕೇಶಿರಾಜನು ಇಂತಹ ಪ್ರಯತ್ನವನ್ನು ಮಾಡಿರುವುದನ್ನು ಈಗ ನೋಡೋಣ.

'ಶಷದ್ವಿತಯಕ್ಕಕ್ಕುಂ ಸತ್ವಂ' ಸಂಸ್ಕೃತದ ಶ, ಷ ಕಾರಗಳು ಅಪಭ್ರಂಶದಲ್ಲಿ ಸಕಾರವಾಗುತ್ತದೆ. ಶಂಕೆ >ಸಂಕೆ, ಶರಂ > ಸರಂ, ಶಂಬರಂ > ಸಂಬರಂ ; ಹರ್ಷಂ > ಹರಿಸಂ, ಭಾಷೆ> ಬಾಸೆ, ಶೇಷೆ > ಸೇಸೆ......

- ಸಂಯುಕ್ತಾಕ್ಷರಗಳು ಸರಳವಾಗುವೆಂದೂ, ಹಾಗೆ ಸರಳವಾಗುವಾಗ ಮಧ್ಯೆ ಅ, ಇ ಅಥವಾ ಉಕಾರಗಳು ಬರುತ್ತವೆ. ಇದನ್ನು ಸ್ವರಭಕ್ತಿ ಎಂದು ಕರೆಯುತ್ತಾರೆ. ಅಿ ಕಾರ ಇಕಾರಗಳ ಮುಂದೆ ಮೂಲ ಶಬ್ದದ ದೀರ್ಘಕ್ಕೆ ಬದಲು ಹ್ರಸ್ವಬರುತ್ತದೆ.

ಯತ್ನಂ > ಜತನಂ ;ಕ್ರಕಚಂ . ಕರಗಸಂ ; ಶ್ರೀ >ಸಿರಿ ; ವರ್ಷಂ > ಬರಿಸಂ ; ಪ್ರಾಯಂ> ಹರಯಂ, ಪ್ರಾಣಂ>ಹರಣಂ, ವ್ಯಾಧಂ > ಬಿಯದಂ

- ಪವರ್ಗವನ್ನು ಬಿಟ್ಟು ಉಳಿದ ಕಚಟತವರ್ಗಗಳ ಪ್ರಥಮಾಕ್ಷರಗಳು ಕ್ರಮವಾಗಿ ಗಜಡದ ಎಂಬ ತೃತೀಯ ವರ್ಣಗಳಾಗುತ್ತವೆ. ಮಹಾಪ್ರಾಣಗಳು ಆಯಾವರ್ಗದ ಅಲ್ಪಪ್ರಾಣಗಳಾಗುತ್ತವೆ.

ವಾಸುಕಿ > ಬಾಸುಗಿ ; ಆಕಾಶಂ > ಆಗಸಂ ; ದೀಪಿಕೆ > ದೀವಿಗೆ ; ವಾಚನಾ > ಬಾಜನೆ; ಸೂಚೀ > ಸೂಜಿ ; ಕಟಕಂ > ಕಡಗಂ ; ತುಟ > ದಡ ; ಜಾತಿ > ಜಾದಿ ; ವಸತಿ > ಬಸದಿ

ಮಹಾಪ್ರಾಣಾಕ್ಷರಗಳು ಅಲ್ಪಪ್ರಾಣಾಕ್ಷರಗಳಾಗುತ್ತವೆ : ಖಳಂ > ಕಳಂ ; ಶಂಖಂ > ಸಂಕಂ ; ಛಂದಂ > ಚಂದಂ; ಕಥೆ > ಕತೆ; ಫಲಕಂ > ಪಲಗೆ, ಝಗಟೆ > ಜಗಳ.

ಕೆಲವು ವಿಶೇಷಗಳು : ಛುರಿಕಾ > ಸುರಿಗೆ, ಛತ್ರಿಕಾ > ಸತ್ತಿಗೆ : ಕುಠಾರಂ > ಕೊಡಲಿ ಪೀಠಿಕೆ> ಪೀಟಿಗೆ

- ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯ ಸಂಯುಕ್ತಾಕ್ಷರಗಳಾಗುತ್ತವೆ ಕನ್ನಡದಲ್ಲಿ ಸಂಯುಕ್ತಾಕ್ಷರಗಳು ಕಡಿಮೆ. ವಿಜಾತೀಯ ಸಂಯುಕ್ತಾಕ್ಷರಗಳು ಇನ್ನೂ ಕಡಿಮೆ.

ಇಚ್ಛೆ > ಇಚ್ಚೆ, ನೇತ್ರಂ > ನೆತ್ತಂ, ವೇತ್ರಂ > ಬೆತ್ತಂ, ಕರ್ಕಶಂ > ಕಕ್ಕಸಂ

ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯವಾಗುವುದಕ್ಕೆ ಮನುಷ್ಯನ ಸೌಲಭ್ಯಾಕಾಂಕ್ಷೆಯೇ ಕಾರಣ. ಕೆಲವು ಶಬ್ದಗಳಲ್ಲಿ ಪದಾದಿಯ ದ್ವಿತ್ವವು ಹೋಗಿ ಬಿಡುತ್ತದೆ ಅಥವಾ ಒಂದು ವರ್ಣವೇ ಲೋಪವಾಗುತ್ತದೆ. ಪದಮಧ್ಯದ ಒತ್ತಕ್ಷರಗಳಲ್ಲಿಯೂ ಒಂದು ಲೋಪವಾಗಾಹುದು.

ಉದಾ : ದ್ರೋಣಿ > ದೋಣಿ, ದ್ಯೂತ > ಜೂದು, ಪತಿವ್ರತಾ > ಹದಿಬದೆ ; ದ್ವಿತೀಯೆ > ಬಿದಿಗೆ, ಶ್ರೇಣಿ > ಸೇಣಿ

- ಸಂಸ್ಕೃತದ ಋ ಸ್ವರಕ್ಕೆ ತದ್ಭವದಲ್ಲಿ ಕೆಲವು ಪರ್ಯಾಯ ವರ್ಣಗಳು ಬರುತ್ತವೆ. ಋ ಎಂಬ ಸ್ವರವು ಕನ್ನಡದಲ್ಲಿ ಇಲ್ಲದಿರುವುದರಿಂದ ಇದಕ್ಕೆ ಕಾರಣವಾಗಿದೆ.

ಉದಾ : ಋಷಿ > ರಿಸಿ ; ಋತು > ರಿತು; ಶೃಂಗಿ > ಸಿಂಗಿ, ಹೃದಯಂ > ಹೆದೆಯಂ ; ವೃಷಭಂ > ಬಸವಂ ; ಪ್ರಾಕೃತ > ಪಾಗುದ

● ಸಂಸ್ಕೃತ ಶಬ್ದದ ಪದಾದಿಯ ಹಾಗೂ ಪದಮಧ್ಯದ ದೀರ್ಘಸ್ವರವು ತದ್ಭವದಲ್ಲಿ ಹ್ರಸ್ವವಾಗುವುದು.

ಕಾರ್ಯಂ > ಕಜ್ಜಂ [ಪದಾದಿಯ ದೀರ್ಘವು ಹ್ರಸ್ವವಾಗಿದೆ]

ಕಾಂಜಿ > ಕಂಜಿ ; ವಿನಾಯಕ > ಬೆನಕ (ಪದಮಧ್ಯದ ದೀರ್ಘ ಸ್ವರವು ಹ್ರಸ್ವವಾಗಿದೆ ); ಶಿಲಾ > ಸಿಲೆ (ಪದಾಂತ್ಯದ ದೀರ್ಘ ಸ್ವರವು ಹ್ರಸ್ವವಾಗಿದೆ );

● ಸಂಧ್ಯಕ್ಷರಗಳಾದ ಐ, ಔ ಇದ್ದಾಗ ಎ/ಏ ಕಾರಗಳು ಬರಬಹುದು.

ಸೈಂಧವಂ > ಸೆಂದವಂ; ವೈದ್ಯಂ > ಬೆಜ್ಜಂ, ವೈಶಾಖ > ಬೇಸಗೆ;

● ಕ್ಷ ಕಾರವು ಉಚ್ಚಾರಣೆಗೆ ಸ್ವಲ್ಪ ಕಷ್ಟವಾದುದು. ಆದ್ದರಿಂದ ಅದು ಸಜಾತೀಯ ದ್ವಿತ್ವವಾಗುತ್ತದೆ ಅಥವಾ ಸರಳವಾಗುತ್ತದೆ.

ರಕ್ಷೆ > ರಕ್ಕೆ ; ಸಾಕ್ಷಿ > ಸಕ್ಕಿ ; ಅಕ್ಷಿ > ಅಚ್ಚಿ ; ಅಕ್ಷಂ > ಅಚ್ಚು;ಕ್ಷೇಮಂ > ಸೇವಂ ; ಕ್ಷಪಣಂ > ಸವಣಂ; ಕ್ಷೀರಂ > ಕೀರಂ; ಕ್ಷಾರಂ > ಕಾರಂ ; ತೀಕ್ಷ್ಣಂ > ತಿಕ್ಕಂ ;

ಇಲ್ಲಿ ಅಕ್ಷಿಯು ಅಚ್ಚಿ ಎಂಬರೂಪವನ್ನು ಪಡೆದಿರುವುದು ವಿಶೇಷವಾದುದು. ಕ ಕಾರವು ಚಕಾರವಾಗುವುದನ್ನು ಭಾಷಾ ವಿಜ್ಞಾನಿಗಳು ತಾಲವ್ಯೀಕರಣ ಎನ್ನುತ್ತಾರೆ. ಕಿಟಕಿಯು ಚಿಟಿಕಿ ಯಾಗುವುದನ್ನು ಗ್ರಾಮೀಣರ ಬಾಯಿಯಲ್ಲಿ ಕಾಣುತ್ತೇವೆ.

ಸಂಸ್ಕೃತದ ಪದಾದಿಯ ಊಷ್ಮವರ್ಣವು [ ಊಷ್ಮ ಎಂದರೆ ಶ, ಷ, ಸ ವರ್ಣಗಳು ] ಲೋಪವಾಗುವುದನ್ನು ಕಾಣಬಹುದು.

ಸ್ಪರ್ಶಂ > ಪರುಸಂ ; ಸ್ಫಟಿಕಂ > ಪಳಿಕು ; ಸ್ಫೋಟಿಕ > ಹೋಳಿಗೆ ; ಸ್ತೋಮಂ > ತೋಮಂ ಸ್ಫಿಕ್ಕಾ > ಪಿಕ್ಕೆ ; ಸ್ತುತಿ > ತುತಿ ;

ತದ್ಭವಗಳಾಗುವಲ್ಲಿ ಬಿಂದುವಿನ ವರ್ತನೆಯನ್ನು ಇಲ್ಲಿ ಗಮನಿಸಬಹುದು.

1) ಬಿಂದು ಆಗಮಕ್ಕೆ : ಮೇಥಿ > ಮೆಂಟಿ ; ಮರ್ಕಟಂ > ಮಂಕಡಂ ; ಕ್ರಮುಕಂ > ಕೌಂಗು

2) ಬಿಂದು ಲೋಪಕ್ಕೆ : ವಾಂಶ್ಯಂ > ವಾಸಂ; ಸಂಸ್ಕೃತ > ಸಕ್ಕದ

● ತದ್ಭವಗಳಾಗುವಲ್ಲಿ ಸಂಸ್ಕೃತದ ಸಂಖ್ಯಾವಾಚಕಗಳಿಗೆ ಉಂಟಾಗುವ ಬದಲಾವಣೆ. ಇವುಗಳಲ್ಲಿ ಸಮಾಸಗಳು ಹೆಚ್ಚು. ಏಕಸರಂ > ಎಕ್ಕಸರಂ ; ದ್ವಿಗುಣಂ> ದುಗುಣಂ, ತ್ರಿಗುಣಂ>ತಿಗುಣಂ; ಚತುಃಪಟ್ಟಂ >ಚೌವಟಂ

● ಸಮಾಸ ಶಬ್ದಗಳು ತದ್ಭವವಾಗುವಾಗ ಎರಡು ಪದಗಳೂ ತದ್ಭವಗಳಾಗಿರಬೇಕೆಂದು ಕೇಶಿರಾಜನು ಹೇಳುತ್ತಾನೆ. ಒಂದು ಪಕ್ಷ ಯಾವುದಾದರೊಂದು ಪದ ತದ್ಭವವಾಗದಿದ್ದರೆ ಅದನ್ನು ಮಿಶ್ರಸಮಾಸ ಎಂದು ಮನ್ನಿಸುತ್ತಾನೆ. ಆತನ ಧಾಟಿ ಹೇಗಿದೆ ಎಂದರೆ' ಎರಡೂ ತದ್ಭವ ಆಗಿದ್ದರೆ ಒಳ್ಳೆಯದಾಗುತ್ತಿತ್ತು. ಏನು ಮಾಡುವುದು ಬಿಡಿ' ಎನ್ನುವಂತೆ ಇದೆ.

ಸರ್ವಲಕ್ಷಣಂ > ಸಬ್ಬಲಕ್ಕಣಂ; ದಶಶಿರಂ > ದಸಸಿರಂ ; ಪರಬ್ರಹ್ಮಂ > ಪರಬೊಮ್ಮಂ; ಪಾದರಕ್ಷೆ > ಪಾದರಕ್ಕೆ ; ದಿಶಾಬಲಿ > ದೆಸೆವಲಿ ; ರತ್ನಮಣಿ > ರತ್ನವಣಿ ; ರತ್ನಪಟಕಾ > ರನ್ನವಟ್ಟಿಗೆ.

- ಶಬ್ದಾಂತ್ಯದ ಸ್ವರಗಳ ಬಗ್ಗೆ ಕೇಶಿರಾಜನು 262 ನೇ ಸೂತ್ರದಲ್ಲಿ ತಿಳಿಸುತ್ತಾನೆ.

ಖನಿ > ಗಣಿ; ಲಂಬನಂ > ಲಂಬಣಂ; ಆಜ್ಞೆ > ಆಣೆ; ಅಂದುಕಂ > ಅಂದುಗೆ.

ಮಾಘಂ > ಮಾಗಿ ; ಸಸ್ಯ > ಸಸಿ; ಗ್ರಂಥಿ >ಗಂಟು............

- ಅಂತ್ಯಸ್ವರ ಲೋಪಕ್ಕೆ :

ಕೀಲಂ > ಕೀಲ್; ಮೀನಂ > ಮೀನ್; ನೀರಂ > ನೀರ್

ಮುಕುಲಂ >ಮುಗುಳ್

ಆಶ್ಚರ್ಯಂ > ಅಚ್ಚರಿ ; ಪ್ರಗ್ರಹಂ > ಹಗ್ಗಂ; ವಿಜ್ಞಾಪನಂ ; ಬಿನ್ನಪಂ ; ಕಪಿಂಜಲಂ > ಕಪಿಂಜು..........

## 4.5 ಅವ್ಯಯ ಪ್ರಕರಣ

ಲಿಂಗ, ವಚನ, ವಿಭಕ್ತಿ ಇವುಗಳು ಇಲ್ಲದ, ಯಾವ ವ್ಯತ್ಯಾಸವನ್ನೂ ಹೊಂದದೆ ವರ್ತಿಸುವ ಶಬ್ದಗಳೇ ಅವ್ಯಯಗಳು, ಸಂಸ್ಕೃತದಲ್ಲಿ ಅವ್ಯಯಗಳನ್ನು ಕುರಿತು 'ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಸು ವಚನೇಷು ಚಂ ಸರ್ವೇಷು ಯನ್ನವ್ಯೇತಿ ಪದವ್ಯಯ' ಎಂದು ಹೇಳಲಾಗಿದೆ. ಸೂತ್ರ 315 ರಿಂದ ಮುಂದಿನ ಕೆಲವು ಸೂತ್ರಗಳಲ್ಲಿ ಕೇಶಿರಾಜನು ಅವ್ಯಯಗಳ ಬಗ್ಗೆ ವಿವರಿಸಿದ್ದಾನೆ. ಅವ್ಯಯವೆಂದರೇನು ಎಂಬುದನ್ನು ಆತನು ನಾಮಪ್ರಕರಣದ ಸಂದರ್ಭದಲ್ಲಿಯೇ ವೃತ್ತಿಯಲ್ಲಿ 'ಅವ್ಯಯ ಲಿಂಗಮೆಂಬುದು ಸಪ್ತವಿಭಕ್ತಿಗಂ ಪುಂಸ್ತ್ರೀ ನಪುಂಸಕಲಿಂಗಕ್ಕಂ ಏಕವಚನ ಬಹುವಚನಮೆಂಬ ವಚನಕ್ಕಂ ಸರಿಯಾಗಿ ಇರ್ದ ತೆಱದೆ ಅರ್ಥಮಂ ಕುಡುಗುಂ'ಎಂದು ಹೇಳಿದ್ದಾನೆ. ಅವ್ಯಯಕ್ಕೆ ವಿಷ್ಣು, ಶಿವ, ಬ್ರಹ್ಮ ಎಂಬ ಅರ್ಥಗಳೂ ಇವೆ. ಕನ್ನಡ ಕೈಪಿಡಿಯಲ್ಲಿ 'ಅವ್ಯಯವೆಂದರೆ (ನಾಮಪದ, ಕ್ರಿಯಾಪದಗಳಂತೆ ) ಲಿಂಗ ವಚನ ವಿಭಕ್ತಿ ಸೂಚಕ ಪ್ರತ್ಯಯಗಳನ್ನು ಹೊಂದದೆ ಇರುವ ಶಬ್ದ'ಎಂದೂ 'ಕೃತ್ ಪ್ರತ್ಯಯಗಳನ್ನಾಗಲಿ, ಆಖ್ಯಾತ ಪ್ರತ್ಯಯಗಳನ್ನಾಗಲಿ ಹೊಂದದಿರುವ ಶಬ್ದ' ಎಂದೂ ಹೇಳಲಾಗಿದೆ. ನಾಗವರ್ಮನು ತನ್ನ ಭಾಷಾ ಭೂಷಣದಲ್ಲಿ 'ಏಕವಚನ ದ್ವಿವಚನ, ಬಹುವಚನ ರಹಿತಂ ಅವ್ಯಯಸಂಜ್ಞಿತಂ 'ಎಂದೂ ಹೇಳಿದ್ದಾನೆ. ಭಟ್ಟಾಕಳಂಕನು 'ಉದುಮಾದವ್ಯಯಂ' ಉದುಂ, ಎನೆ, ಅನ್ನಿಗಂ, ಅದು, ಅಕ್, ವೋಲ್, ಬೋಲ್ ಮೊದಲಾದುವು ಅವಯಗಳೆಂದಿದ್ದಾನೆ.

ಕೇಶಿರಾಜನು ತಿಳಿಸಿರುವ ಅವ್ಯಯಗಳು ನಾನಾರ್ಥಗಳಲ್ಲಿ ವರ್ತಿಸುತ್ತವೆ.

ನಿಷೇಧಾರ್ಥಕ ಅವ್ಯಯ : ಇಲ್ಲ

ಕಾರಣವಿಲ್ಲ ಎಂಬರ್ಥದಲ್ಲಿ : ನಿರ್ನೆರಂ / ನಿರ್ನಿರ್

ಮೌನಾರ್ಥದ ಅವ್ಯಯಗಳು : ಸುಮ್ಮಗೆ, ಸುಮ್ಮನೆ, ಉಸಿಕನೆ.

ನಿಷ್ಕ್ರಿಯಾರ್ಥದಲ್ಲಿ ಬರುವುದು : ಗುಱುಗುಮ್ಮಗೆ, ಬಿನ್ನಗೆ, ಬಿನ್ನನೆ.

ಸ್ಥಾನ, ದೆಸೆ, ಕಾಲ, ಸಂಖ್ಯೆಗಳನ್ನು ಸೂಚಿಸುವುವು : ಎಲ್ಲಿಯಾನುಂ, ಎತ್ತಾನುಂ, ಎಂದಾನುಂ, ಅಣಂ, ಕಾರ್ಯಮಣಮಿಲ್ಲ.........

ಹೆಚ್ಚಾದ ಅರ್ಥದಲ್ಲಿ ಬರುವುವು : ನಾಡೆ, ನೆಜೆ, ಕದಂ, ಆದಂ, ಪಿರಿದು, ಮಿಗೆ, ಕೆನ್ನಂ

ಶ್ರೀಘ್ರ ಎಂಬ ಅರ್ಥದಲ್ಲಿ : ಭೋಂಕನೆ, ಚೆಕ್ಕನೆ, ಬೋರನೆ,

ನಿಶ್ಚಯಾರ್ಥದಲ್ಲಿ : ವಲಂ, ವೆಱಂ, ದಲ್, ಏಗಂ

ಪರಿಭ್ರಮಣಾರ್ಥದಲ್ಲಿ : ತಿಟ್ಟನೆ, ತಿಱ್ಱನೆ, ಬಟ್ಟನೆ

ಪ್ರಕಾರಾರ್ಥದಲ್ಲಿ : ಅಂತು, ಇಂತು, ಉಂತು, ಎಂತು

ಉಪಮಾನಾರ್ಥದಲ್ಲಿ : ಅಂತಿರೆ, ಅಂತೆ, ಅಂತೆವೋಲ್

ಅನಂತರದ ಅರ್ಥದಲ್ಲಿ : ಬಟಿಕ್ಕೆ, ಬಟಿಕಂ, ಬಟಿಯಂ, ಬಟಿಕೆ

ನಿರ್ದಿಷ್ಟಾರ್ಥದಲ್ಲಿ : ಮೇಣ್, ಒಡನೆ, ಕೀಱೆದು, ಗಳ/ಗಡ

ಸಮುಚ್ಚಯ : ಉಂ, ಅಂ

ಅನುಕರಣಾವ್ಯಯಗಳು : ಧಿಗಿಲನೆ, ಭುಗಿಲನೆ, ಭೋರನೆ, ಸರಸರನೆ ಪಟಪಟನೆ

ಪ್ರತ್ಯಯಾಂತ ಅವ್ಯಯಗಳು : ನೂಂಕದು, ಕಮ್ಮನೆ, ಬಿಮ್ಮನೆ, ತೆತ್ತದು

ಕಾಲಾರ್ಥದಲ್ಲಿ : ಅಂದು, ಇಂದು, ಎತ್ತಂ, ಎಂದುಂ, ಆಗಳ್

ದಿನ ಸೂಚಕಗಳು : ನಿನ್ನೆ, ಮೊನ್ನೆ, ನಾಳೆ, ನಾಡಿದು

ಅವ್ಯಯಗಳ ಲೆಕ್ಕ ಬೇಗ ಮುಗಿಯುವುದಿಲ್ಲ. ಕೇಶಿರಾಜನು ಪರಿಚಯ ಮಾಡಿಕೊಟ್ಟಿರುವ ಅವ್ಯಯಗಳನ್ನು ಮಾತ್ರ ಇಲ್ಲಿ ನೋಡಿದ್ದೇವೆ. ಇದರ ಬಗ್ಗೆ ವಿಚಾರ ಮಾಡಿರುವ ಹಲವು ಕೃತಿಗಳು ಪ್ರಕಟವಾಗಿವೆ. ಇಂಗ್ಲಿಷ್ ಪರಿಚಯದ ನಂತರ ಸಿಂಪ್ಲಿ, ಫ್ರ್ಯಾಂಕ್‌ಲಿ, ಆಲ್‌ಮೋಸ್ಟ್, ಮೈಗಾಡ್, ಗುಡ್‌ಗಾಡ್, ಸಡನ್ಲಿ (ಸಡನ್ನಾಗಿ), ಬ್ರೀಫ್ಲಿ ಮುಂತಾದ ಶಬ್ದಗಳನ್ನು ಜನರು ಬಳಸುತ್ತಾರೆ. ಇವುಗಳೂ ಅವ್ಯಯದ ಹಾಗೆ ಕೆಲಸ ಮಾಡುತ್ತವೆ.

ಕೇಶಿರಾಜನ ಕಾಲಕ್ಕೆ ಕಾಲವಾಚಕಾವ್ಯಯಗಳಲ್ಲಿ ಕೆಲವು ಅಪರಿಚಿತವಾಗುತ್ತಿದ್ದುವೆಂದು ತೋರುತ್ತದೆ. ನಾಳಿದ್ದು ಎಂಬುದಕ್ಕೆ ಪರ್ಯಾಯವಾಗಿ ನಾಡಿದ್ದು ಎಂಬುದೂ ಬಳಕೆಯಲ್ಲಿದೆ.

ಅವ್ಯಯಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಂತಿಲ್ಲ. ಕೆಲವು ಅವ್ಯಯಗಳು ನಿಯಮಕ್ಕೆ ಅಪವಾದದಂತೆ ಇರುವುದು ಕಂಡುಬರುತ್ತದೆ.

ಉದಾ : ಆಗಳಿಂಗೆ, ಆಗಳಿನ, ನಿನ್ನಿಂಗೆ, ನಾಳಿಂಗೆ, ಮೊನ್ನಿನ..... ಆಹಹ ಎಂಬುದು ನೋವನ್ನು ಸೂಚಿಸಿದರೆ, ಅಕ್ಕಟ ಎಂಬುದು ವಿಷಾದವನ್ನು, ದುಃಖವನ್ನು ಸೂಚಿಸುತ್ತದೆ. ಅಯ್ಯೋ, ಅಮ್ಮಾ, ಅಪ್ಪಾ ಮುಂತಾದುವನ್ನೂ ಕೇಳಿದ್ದೀರಿ. ಇಲ್ಲಿ ಅಯ್ಯ, ಅಮ್ಮ, ಅಪ್ಪ ಎಂಬ ಸಂಬಂಧಗಳು

ಮುಖ್ಯವಾಗುವುದಿಲ್ಲ. ನೋವಾದಾಗ ಯಾರ ಬಾಯಿಂದಲಾದರೂ ಇಂತಹ ಶಬ್ದಗಳು ಹೊರಡುತ್ತವೆ. ಒಬ್ಬ ಕಿಲಾಡಿಯು ಒಬ್ಬ ರಾಜನ ಬಳಿ ಇದ್ದನಂತೆ. ಯಾರೊಡನೆಯಾದರೂ ಅವರವರ ಭಾಷೆಯಲ್ಲಿ ಮಾತನಾಡುತ್ತಿದ್ದನಂತೆ. ರಾಜನಿಗೆ ಇವನ ಮಾತೃಭಾಷೆಯನ್ನು ತಿಳಿಯುವ ಕುತೂಹಲವಾಯಿತು. ಮಂತ್ರಿಗೆ ಸೂಚಿಸಿದ. ಮಂತ್ರಿಗೂ ಮೊದಲು ಏನೂ ಉಪಾಯ ಹೊಳೆಯಲಿಲ್ಲ. ಕಡೆಗೊಂದು ಉಪಾಯವನ್ನು ಹೂಡಿದ. ಕಿಲಾಡಿಯು ಮಲಗಿರುವಾಗ ದೊಣ್ಣೆಯಿಂದ ಬಡಿಸಿದನಂತೆ. ತಕ್ಷಣವೇ ಅವನು ಎವುಡ್ರಾ ಅದಿ ಎಂದು ಎದ್ದನಂತೆ. ಆಗ ಮಂತ್ರಿ ರಾಜನ ಬಳಿ ಬಂದು ನಿಜ ವಿಷಯ ತಿಳಿಸಿದನಂತೆ. ಎಷ್ಟೋ ಅವ್ಯಯಗಳು ಹೀಗೆ ಬಾಯಿಯಿಂದ ತಕ್ಷಣ ಹೊರಡುತ್ತವೆ, ಇನ್ನು ಮುಂದೆಯೂ ಸ್ವೀಕೃತ ಶಬ್ದಗಳು ಸೇರ್ಪಡೆಯಾಗಬಹುದು.

## 4.6 ಕೆಲವು ವಿಶೇಷವಿಚಾರಗಳು

1. ತದ್ಭವ ಎಂದರೆ 'ಅದರಿಂದ ಹುಟ್ಟಿದ್ದು' ಎಂದರೆ ಸಂಸ್ಕೃತದಿಂದ ಹುಟ್ಟಿದ್ದು ಎಂದು ಅರ್ಥ. ಕೆಲವು ಸಂಸ್ಕೃತ ಪದಗಳು ತದ್ಭವರೂಪ ಪಡೆಯುವಾಗ ಮೂಲಕ್ಕೆ ತುಂಬಾ ದೂರವಾದ ರೂಪಗಳನ್ನು ಪಡೆದುಕೊಳ್ಳುತ್ತವೆ. ಉದಾಹರಣೆಗೆ ವೃಷಭಂ, ಬಸವಂ, ವಲ್ಲಭಂ, ಬಲ್ಲಹಂ ಇಂತಹ ಪದಗಳ ನಡುವೆ ಇಷ್ಟು ವ್ಯತ್ಯಾಸ ಕಂಡುಬರುವುದಕ್ಕೆ ಒಂದು ಕಾರಣವಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆ ಕಾರಣ ಯಾವುದೆಂದರೆ ಸಂಸ್ಕೃತದಿಂದ ಪ್ರಾಕೃತಕ್ಕೆ ಹೋದ ಪದಗಳು ಪುನಃ ಅಲ್ಲಿಂದ ಕನ್ನಡಕ್ಕೆ ಬಂದಿವೆ ಎನ್ನುವುದು. ಏಕೆಂದರೆ ಜೈನ ಧಾರ್ಮಿಕ ಸಾಹಿತ್ಯವು ಬಹುಪಾಲು ಪ್ರಾಕೃತದಲ್ಲಿತ್ತು. ಅದನ್ನು ಹಳಗನ್ನಡಕ್ಕೆ ಕವಿಗಳು ಪರಿವರ್ತಿಸಿರುವುದು ಕಂಡುಬರುತ್ತದೆ.

ಕೇಶಿರಾಜನ ಅಪಭ್ರಂಶ ಪ್ರಕರಣವನ್ನು ಪ್ರಾಕೃತ ಭಾಷೆಯ ಹಿನ್ನೆಲೆಯಲ್ಲಿ ನೋಡುವುದಾದರೆ ಅವನು ಕೊಟ್ಟಿರುವ ತದ್ಭವಗಳ ಸ್ವರೂಪಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತದೆ. ತೆಲುಗಿನ ವೈಯಾಕರಣರು ಪ್ರಾಕೃತಸಮ ಮತ್ತು ಪ್ರಾಕೃತ ಭಾವ (ತದ್ಭವದ ಹಾಗೆ) ಶಬ್ದಗಳನ್ನು ಪಟ್ಟಿಮಾಡಿರುವಂತೆ ಕನ್ನಡ ವೈಯಾಕರಣರೂ ಮಾಡಿದ್ದರೆ ಚೆನ್ನಾಗಿರುತ್ತಿತ್ತು.

| ಸಂಸ್ಕೃತ | ಪ್ರಾಕೃತ | ಕನ್ನಡ |
|---|---|---|
| ದಂಷ್ಟ್ರಾ | ದಾಢಾ | ದಾಡೆ |
| ವೃತ್ತಂ | ವಟ್ಟಂ | ಬಟ್ಟ |
| ಯಜ್ಞಃ | ಜಣ್ಣೋ | ಜನ್ನ |
| ಸಾಕ್ಷೀ | ಸಕ್ಖೀ | ಸಕ್ಕಿ |
| ಶಯ್ಯಾ | ಸೆಜ್ಜಾ | ಸೆಜ್ಜೆ |
| ವಿದ್ಯಾ | ವಿಜ್ಜಾ | ಬಿಜ್ಜೆ |
| ಸಿಂಹಃ | ಸಿಂಘೋ | ಸಿಂಗ |
| ಜ್ಯೋತ್ಸ್ನಾ | ಜೋಣ್ಹಾ | ಜೊನ್ನ |
| ನೂಪುರಂ | ಣೇವುರಂ | ನೇವುರ |

| | | |
|---|---|---|
| ಪ್ರತಿ | ಪಡಿ | ಪಡಿ |
| ವಕ್ರ | ವಂಕ | ವಂಕ |
| ಅಂಗಾರ | ಇಂಗಾಲ | ಇಂಗಾಲ |
| ಚಂದ್ರ | ಚಂದ | ಚಂದ |
| ಶ್ರವಣ | ಸವಣ | ಸವಣ |
| ಸೂಕ್ತಿ | ಸುತ್ತಿ | ಸುತ್ತಿ |
| ಅಗ್ನಿ | ಅಗ್ಗಿ | ಅಗ್ಗಿ |
| ಮಯೂರ | ಮೋರ | ಮೋರ |
| ಕಾರ್ಯ | ಕಜ್ಜ | ಕಜ್ಜ |
| ಭಾಂಢಗೃಹ | ಭಂಡಹರ | ಭಂಡಾರ |
| ಕೋಷ್ಠಾಗೃಹ | ಕೊಟ್ಟಹರ | ಕೊಟ್ಟಾರ |
| ದೇವಗೃಹ | ದೇವಹರ | ದೇವಾರ |
| ಚರ್ಮಯಷ್ಟಿ | ಚಮಟ್ಟೆ | ಚಮ್ಮಟಿಗೆ |
| ವೃಷಭ | ವಸಭ | ಬಸವ |
| ಭರ್ತ | ಭಟ್ಟೋ | ಭಟ್ಟ..... ಇತ್ಯಾದಿ |

2 ಕೇಶಿರಾಜನು ಸೂತ್ರ 312, 313ರಲ್ಲಿ 'ತತ್ಸಮ' ಗಳನ್ನು ಕುರಿತು ಹೇಳಿದ್ದಾನೆ. ಸಮಾಸಗಳಲ್ಲಿ ಕೆಲವು ಪದಗಳು ಕನ್ನಡ ಮತ್ತು ಸಂಸ್ಕೃತಗಳೆರಡಲ್ಲಿಯೂ ಒಂದೇ ರೀತಿಯಲ್ಲಿ ಪ್ರಯೋಗವಾಗುತ್ತಿರುವುದನ್ನು ನೋಡಿ ಅವುಗಳನ್ನು ಎರಡು ಭಾಷೆಗಳಿಗೂ ಸಮ ಎಂದು ತಿಳಿದು ಅವುಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಅವುಗಳು ಯಾವುವೆಂದರೆ ಮಣಿ, ಮಂಚಂ, ತೋರಣಂ, ಅಟ್ಟಂ, ಗೋಣಿ, ಸಬಳಂ, ಅಂಕಂ, ಲತೆ, ಕಂಕಣಂ, ಬಿಲಂ, ಬಂದಿ, ಮಾಲೆ......ಇತ್ಯಾದಿ. ಈ ಶಬ್ದಗಳು ಎರಡು ಭಾಷೆಗಳಿಗೂ ಸಮಾನವಾದುದರಿಂದ ಅವುಗಳನ್ನು ತತ್ಸಮ ಎಂದಿದ್ದಾನೆ.

3. ತದ್ಭವಗಳನ್ನು ಸಂಸ್ಕೃತದ ಭ್ರಷ್ಟ ರೂಪಗಳೆಂದು ತಿಳಿಯಲಾಗಿದೆ. ಎಷ್ಟೋ ಪದಗಳನ್ನು ನೋಡಿದರೆ ಅವುಗಳು ದ್ರಾವಿಡ ಮೂಲದ ಅಚ್ಚಗನ್ನಡ ಶಬ್ದಗಳೆ ಆಗಿವೆ ಎನ್ನಿಸುತ್ತದೆ. ಪ್ರತಿಯೊಂದು ಶಬ್ದವನ್ನು ಸಂಸ್ಕೃತ ಮೂಲದಲ್ಲಿಯೇ ಶೋಧಿಸುವುದು ಸಾಧು ಎನ್ನಿಸುವುದಿಲ್ಲ. ಕೆಲವು ದೇಶ್ಯ ಶಬ್ದಗಳು ಸಂಸ್ಕೃತಕ್ಕೆ ಸೇರಿರಬಹುದೆಂದು ಹೇಳಬಹುದು. ಬರೋ, ಎಮಿನೋ ಮುಂತಾದವರು ಈ ದಿಕ್ಕಿನಲ್ಲಿ ಕೆಲಸ ಮಾಡಿದ್ದಾರೆ. ಕನ್ನಡಿಗರು ಕೆಲವು ವಸ್ತು, ಪ್ರಾಣಿಗಳಿಗೆ ಹೆಸರನ್ನು ಕೊಟ್ಟೇ ಇರಲಿಲ್ಲವೆಂದು ತಿಳಿಯುವುದು ಸರಿಯಲ್ಲ. ಮೀನ್, ಮುಗುಳ್, ನೀರ್, ಕೋಟೆ, ಹಗ್ಗ ಮುಂತಾದ ಶಬ್ದಗಳು ಕನ್ನಡದಲ್ಲಿರಲಿಲ್ಲ ಎಂದು ತಿಳಿಯುವುದು ಹೇಗೆ ಸಾಧ್ಯ. ಏಣಿ, ದಾಳಿಂಬೆ, ಕುಂಬಳ, ಕೊಡಲಿ, ಬಸವ, ದೋಣಿ ಮುಂತಾದುವು ಕನ್ನಡಿಗರಿಗೆ ಗೊತ್ತಿಲ್ಲದ ವಸ್ತುಗಳಲ್ಲ. ಕನ್ನಡಿಗರು

3000 ವರ್ಷಗಳಷ್ಟು ಹಿಂದೆಯೇ ಭಾಷೆಯನ್ನು ಸಾಹಿತ್ಯಕ್ಕೆ ಬಳಸುವ ಕಲೆಯನ್ನು ತಿಳಿದವರಾಗಿದ್ದರು. ಸಂಸ್ಕೃತ - ದ್ರಾವಿಡ ಭಾಷೆಗಳ ನಡುವೆ ಬಹಳ ಹಿಂದಿನಿಂದಲೇ ಕೊಳ್ಳುವ ಕೊಡುವ ಸಂಪ್ರದಾಯವಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಸಂಸ್ಕೃತದ ಮೇಲಿನ ಗೌರವದಿಂದ ಸಣ್ಣಪುಟ್ಟ, ದಿನನಿತ್ಯದ ಬಳಕೆಯ ಶಬ್ದಗಳೂ ಕೂಡ ಸಂಸ್ಕತದಿಂದ ಬಂದ ತದ್ಭವಗಳೆಂದು ಹಿಮ್ಮುಖವಾಗಿ ಚಲಿಸಿ ಚಲಾಯಿಸುವುದು ಸರಿಯಾದುದಲ್ಲ. ಎಷ್ಟೋ ಶಬ್ದಗಳು ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿವೆ ಎಂಬುದನ್ನು ವಿದ್ವಾಂಸರು ತೋರಿಸಿದ್ದಾರೆ. ಕೇಶಿರಾಜನು ಸಂಸ್ಕೃತದಿಂದ ಕನ್ನಡ ಭಾಷೆಯು ಹುಟ್ಟಿದೆ ಎಂದು ನಂಬಿದ್ದುದರಿಂದ ಮತ್ತು ಆಗ ಭಾಷಾ ವಿಜ್ಞಾನ ಶಾಖೆಯು ಇರಲಿಲ್ಲವಾದುದರಿಂದ ಎಷ್ಟೋ ಅಚ್ಚಗನ್ನಡ ಶಬ್ದಗಳನ್ನು ತದ್ಭವಗಳೆಂದು ಹೇಳಿದ್ದಾನೆ. ಉದಾಹರಣೆಗೆ ಕೋಟೆ > ಗೋಡೆ. ತಾತಂ > ತಂದೆ ಎಂಬ ಪದಗಳನ್ನು ನೋಡಬಹುದು. ತಂದೆ ಎಂಬ ಪದಕ್ಕೆ ದ್ರಾವಿಡ ಭಾಷಾವರ್ಗದಲ್ಲಿ ಜ್ಞಾತಿ ಪದಗಳಿರುವುದನ್ನು ನೋಡಬಹುದು. ಕುಕ್ಕಟ ಎಂಬುದು ಕೋಟೆ ಆಯಿತು ಎಂದು ಹೇಳಿರುವುದೂ ಕೂಡ ಸರಿಕಾಣುವುದಿಲ್ಲ. ಕೋಟೆ ಎಂದು ಬರೆಯುವಾಗ ರಳವನ್ನು ಬರೆದಿರುವುದೇ ತಿಳಿಸುತ್ತದೆ - ಇದು ಕನ್ನಡದ ಸ್ವಂತ ಶಬ್ದ ಎಂಬುದನ್ನು. ಆದ್ದರಿಂದ ಸಂಸ್ಕೃತಕ್ಕೆ ಅನೇಕ ದ್ರಾವಿಡ ಶಬ್ದಗಳು ನೇರವಾಗಿಯೋ ಪರೋಕ್ಷವಾಗಿಯೋ ಹೋಗಿ ಸೇರಿವೆ ಎಂದು ತಿಳಿಯಬೇಕಾಗುತ್ತದೆ.

4. ಭಾಷಾ ವಿಜ್ಞಾನಿಗಳು 'ದ್ರಾವಿಡ ಭಾಷೆಗಳಲ್ಲಿ ನ್ಯಾಯವಾಗಿ ಕ್ರಿಯಾಪದವೇ ಇಲ್ಲ' ಎಂದು ಹೇಳುತ್ತಾರೆ. ಸ್ಥೂಲನೋಟಕ್ಕೆ ಈ ಹೇಳಿಕೆಯು ಅಸಂಬದ್ಧವೆಂದು ತೋರುತ್ತದೆ. ಆದರೆ ಅವರ ವಿವರಣೆಯನ್ನು ಕೇಳಿದ ಬಳಿಕ ಅವರ ಆಶಯವೇನೆಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ. ಕ್ರಿಯಾರ್ಥವುಳ್ಳ ಧಾತುಗಳಿಲ್ಲ ಎಂದು ಅರ್ಥಮಾಡಿಕೊಳ್ಳಬಾರದು. ಯಾವ ಭಾಷೆಯೂ ಕ್ರಿಯಾಪದಗಳಿಲ್ಲದೆಯೇ ಬದುಕಿರಲಾರದು. ಇಲ್ಲಿ ಧಾತುಗೆ ಹತ್ತುವ ಆಖ್ಯಾತ ಪ್ರತ್ಯಯಗಳು ಸರ್ವನಾಮಗಳಾಗಿರುವುದನ್ನು ತಿಳಿಯ ಹತ್ತುವ ಆಖ್ಯಾತ ಪ್ರತ್ಯಯಗಳು ಸರ್ವನಾಮಗಳಾಗಿರುವುದನ್ನು ತಿಳಿಯಬಹುದು. ಧಾತುಗಳು ಗುಣವಾಚಕಗಳ ರೂಪವನ್ನು ತಾಳಿ, ಸರ್ವನಾಮವನ್ನು ಪಡೆದುಕೊಳ್ಳುತ್ತವೆ. ವಾಕ್ಯದಲ್ಲಿ ಎರಡು ನಾಮಪದಗಳಿರವಂತಾಗಿ ಅವುಗಳಿಂದಲೆ ಕೆಲಸವಾಗುವುದರಿಂದ ಮೇಲಿನ ಹೇಳಿಕೆಯ ಸೃಷ್ಟಿಯಾಯಿತು. ಇಂಗ್ಲಿಷಿನಲ್ಲಿ ಹಿ ಈಸ್ ಎ ಬಾಯ್ ಎಂಬುದನ್ನು 'ಅವನು ಒಬ್ಬ ಹುಡುಗ ಆಗಿದ್ದಾನೆ' ಎಂದು ಅನುವಾದ ಮಾಡುವುದಿಲ್ಲ. 'ಅವನು ಒಬ್ಬ ಹುಡುಗ' ಎಂದು ಅನುವಾದ ಮಾಡುವುದು ಕನ್ನಡಕ್ಕೆ ಒಗ್ಗುತ್ತದೆ. ಇಲ್ಲಿ ಕ್ರಿಯಾಪದವಿಲ್ಲದೆಯೂ ಅರ್ಥವು ಪೂರ್ಣವಾಗುತ್ತದೆ. 'ಆನ್ ಕೇಶವನೆನ್' ಎಂಬ ಉದಾಹರಣೆಯಲ್ಲಿ ನಾಮಪದಕ್ಕೂ ಆಖ್ಯಾತ ಪ್ರತ್ಯಯ 'ಎನ್' ಎಂಬುದು ಹತ್ತಿದೆ. ಕ್ರಿಯಾಪದವನ್ನು ಬಿಟ್ಟು ಅರ್ಥ ಪೂರ್ಣವಾಗುತ್ತದೆ. ವಿಧ್ಯರ್ಥಕಗಳಾದ ಮಾಡು, ನೋಡು, ತಿಳಿ, ಮೀ, ನೋನ್ ಮುಂತಾದುವುಗಳನ್ನು ಬಿಟ್ಟರೆ ಮಿಕ್ಕಕ್ರಿಯೆಗಳು ನಾಮಪದಗಳಂತೆಯೇ ಇವೆ. ರಾಮಂ ಮಾಡಂ > ರಾಮನ್ ಮಾಡನ್ ಎಂಬಲ್ಲಿ ರಾಮನ್ ಮಾಡನ್ ಎಂಬ ಎರಡೂ ಪದಗಳು ನಾಮ ಪದಗಳೆಂದು ತಿಳಿದರೆ ಕ್ರಿಯಾಪದವಿಲ್ಲದೆಯೂ ಕೆಲಸವಾಗುತ್ತದೆ ಎನ್ನಬಹುದು.

5) 'ಅಲ್' ವಿಚಾರ. ಮಧ್ಯಮ ಪುರುಷ ವಿಧ್ಯರ್ಥಕ ಕ್ರಿಯಾಪದವು ನಿಷೇಧಾರ್ಥವನ್ನು ಸೂಚಿಸುವಾಗ 'ಅಲ್' ಪ್ರತ್ಯಯವನ್ನು ಪಡೆದುಕೊಳ್ಳುತ್ತದೆ.

(a) ಯಾವುದಾದರೂ ಪ್ರಯೋಜನ ವಸ್ತುವಿನ ಸಂದರ್ಭದಲ್ಲಿ ಅದಕ್ಕೆ ಸಂಬಂಧಿಸಿದ ಕ್ರಿಯೆಯ ಮೇಲೆ 'ಅಲ್' ಪ್ರತ್ಯಯ ಬರುತ್ತದೆ.

(b) ಒಂದು ಕ್ರಿಯೆಯು ಮತ್ತೊಂದು ಕ್ರಿಯೆಯ ಅರ್ಥವನ್ನು ಸೂಚಿಸುವಾಗ 'ಅಲ್' ಪ್ರತ್ಯಯ ಬರುತ್ತದೆ.

(c) ಪ್ರತಿಷೇಧಾರ್ಥವನ್ನು ತಿಳಿಸದ ಕೆಲವು ಕಡೆಗಳಲ್ಲಿ 'ಅಲ್' ಎಂಬುದಕ್ಕೆ 'ಕ' ಕಾರವು ಸೇರುತ್ತದೆ.

(d) ಕೆಲವು ಕಡೆಗಳಲ್ಲಿ ಅಲ್ ಎಂಬ ಪ್ರತ್ಯಯ ಲೋಪವಾಗಿ ಪ್ರಯೋಗದಲ್ಲಿಯೇ ಅದರ ಇಂಗಿತವನ್ನು ತಿಳಿದುಕೊಳ್ಳಬಹುದು.

ವಿಧ್ಯರ್ಥಕ ನಿಷೇಧಾರ್ಥದಲ್ಲಿ :

ಉಸಿರ್ + ಅಲ್ + ಇಂ = ಉಸಿರಲಿಂ (ಉಸಿರಬೇಡಿ)

ಮೀಱು + ಅಲ್ + ಇಂ = ಮೀಱಲಿಂ (ಮೀರಬೇಡಿ)

- ವಿಧ್ಯರ್ಥವಲ್ಲದ ಪ್ರತಿಷೇದಾರ್ಥದಲ್ಲಿ :

  ಬನದೊಳ್ ಪುಗಲ್ ಪುಗಲೆಂಬ ಗಂಡುಗೋಗಿಲೆ

- ಪ್ರಯೋಜನ ವಸ್ತುವಿಗೆ ಕಾರಣವಾದ ಕ್ರಿಯೆಯಲ್ಲಿ :

  ಮಾತಱೆಯಲ್ತಕ್ಕ ವಿವೇಕಂ, ಬಿಡದೀಯಲ್ತಕ್ಕ ಸಂಪತ್ತಿ

- ಕ್ರಿಯಾರ್ಥವನ್ನು ಸೂಚಿಸುವುದರಲ್ಲಿ :

  ಗೆಲಲ್ ಬಗೆದಂ, ಪಗಲ್ಬಂದಂ

- ಅಲ್‌ಗೆ ಪರ್ಯಾಯವಾಗಿ ಅಲ್ಕೆ ಬಂದಿರುವಲ್ಲಿ :

  ನುಡಿಯಲ್ಕೆ ಬಲ್ಲಂ, ಪೇೞಲ್ಕೆ ಕೇಳ್ದಂ

- ಅಲ್ ಲೋಪವನ್ನು ಸೂಚಿಸುವಲ್ಲಿ ;

  ಉಡಲ್ವೇಟ್ > ಉಡವೇಟ್ ; ತೊಡಲ್ವೇಟ್ > ತೊಡವೇಟ್

6) ನಿಷೇಧಾರ್ಥಕ 'ಅ' ಪ್ರತ್ಯಯದ ಬಗ್ಗೆ ಆಧುನಿಕ ಭಾಷಾ ವಿಜ್ಞಾನಿಗಳು ಗಮನ ಹರಿಸಿದ್ದಾರೆ. ತರ್, ಬರ್ ಧಾತುಗಳ ಮೇಲೆ 'ಅ' ಬಂದು ಸೇರಿದಾಗ ಅವುಗಳು ತರ್ + ಅ + ಅನ್ = ತರನ್, ಬರ್ + ಅ + ಅನ್ = ಬರನ್ ಎಂದು ಆಗಬೇಕಾಗಿತ್ತು. ಆದರೆ ಅವುಗಳು ತಾರನ್, ಬಾರನ್ ಎಂಬ ರೂಪವನ್ನು ತಾಳಿವೆ. ಇಲ್ಲಿನ ಧಾತು ಸ್ವರೂಪವೇ ದೀರ್ಘವಾಗಿರಬಹುದೆಂಬ ಅನುಮಾನ ಹುಟ್ಟುತ್ತದೆ ಏನೇ ಆದರೂ ತರನ್, ಬರನ್ ಎಂಬುವು ಸರಿಯಾದ ರೂಪಗಳು ಎನ್ನಸುತ್ತದೆ. ತಿನ್ನನ್, ಕುಡನ್, ಎಂದೂ ಆಗಬಹುದಲ್ಲವೆ. ಆದಿ ದೀರ್ಘವಾಗುವುದರಿಂದ ಅದಕ್ಕೆ ನಿಷೇದಾರ್ಥವು ಘಟಿಸದೆ ಸಂಬೋಧನೆಯ ಭಾವವನ್ನು ಮೂಡಿಸುವುದುಂಟು. ಉದಾ : ಬಾರ ಮರಾಳಿಕಾ ಗಮನೆ ; ತಾರ ಮದಗಜಗಮನೆ. ಬಾರ ತಾರ ಎಂಬುವು ನಿಷೇಧಾರ್ಥಕವಲ್ಲ.

7) ಇಸು ಎಂಬ ಪ್ರತ್ಯಯ ವಿಚಾರ. ಕನ್ನಡ ಮತ್ತು ಸಂಸ್ಕೃತ ಧಾತುಗಳೆರಡಕ್ಕೂ ಇಸು ಪ್ರತ್ಯಯು ಹತ್ತುತ್ತದೆ. ಕನ್ನಡದಲ್ಲಿ ಇದು ಸ್ವಯಂ ಕರ್ತೃತ್ವವಾಗಿದೆ ಮತ್ತು ಅನ್ಯ ಕರ್ತೃಕಗಳನ್ನು

(ಬೇರೆಯವರ ಕೈಯಲ್ಲಿ ಮಾಡಿಸುವುದು) ಸೂಚಿಸಿದರೆ ಸಂಸ್ಕೃತದಲ್ಲಿ ಕೇವಲ ಸ್ವಯಂ ಕರ್ತೃತ್ವವನ್ನು ಸೂಚಿಸುತ್ತದೆ. ಪ್ರಯೋಜಕ ವಸ್ತುವನ್ನು, ಕರ್ತೃತ್ವವನ್ನು ಪ್ರಸ್ತಾಪಿಸುವಾಗ ಕನ್ನಡ ಮತ್ತು ಸಂಸ್ಕೃತಗಳೆರಡರಲ್ಲೂ ಇಸು ಪ್ರತ್ಯಯವು ಬರುತ್ತದೆ. (ಸಂಸ್ಕೃತ ಎಂದರೆ ಸಂಸ್ಕೃತ ಭಾಷೆಯಲ್ಲ ; ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ ಸಮಸಂಸ್ಕೃತ ಶಬ್ದಗಳೆಂಬುದನ್ನು ಮರೆಯಬಾರದು) ಇಸು ಎಂಬುದು ಕನ್ನಡದಲ್ಲಿ ಒಂದೇ ಅಕ್ಷರದ ಧಾತುಗಳ ಮೇಲೆಯೂ ಬರುತ್ತದೆ. ಸಂಸ್ಕೃತದಲ್ಲಿ ಅನೇಕ ಅಕ್ಷರಗಳಿರುವ ಧಾತುವಿನ ಮೇಲೆ ಮಾತ್ರ ಬರುತ್ತದೆ.

ಉದಾ : ಮಾತಿಂ ನಗಿಸಿದಂ ; ಪಜ್ಜೆಯಂ ಕಾಣಿಸಿದಂ.......

ಎಂಬ ಉದಾಹರಣೆಗಳಲ್ಲಿ ನಕ್ಕವನು ಒಬ್ಬ, ನಗಿಸಿದವನು ಬೇರೆ ಒಬ್ಬನಾಗಿದ್ದಾನೆ. ಆದ್ದರಿಂದ ಕ್ರಿಯೆಗೆ ಕಾರಣ ಬೇರೆಯವನ ಪ್ರೇರಣೆಯಾಗಿರುತ್ತದೆ. ಇದು ಅನ್ಯಕರ್ತೃಕವಾದದ್ದು.

ದೃಷ್ಟಿಸು, ನಿಟ್ಟಿಸು ಇತ್ಯಾದಿಗಳಲ್ಲಿ ಬೇರೆಯವರ ಪ್ರೇರಣೆ ಇಲ್ಲ. ಇದು ಸ್ವಯಂ ಕರ್ತೃಕವೆನ್ನಿಸಿಕೊಳ್ಳುತ್ತದೆ.

ಸಂಸ್ಕೃತದಲ್ಲಿ ಖಂಡಿಸು ಎಂದು ಬಂದಾಗ ಅದು ಸ್ವಯಂ ಕರ್ತೃಕವಾಗಿದೆ. ಆದರೆ ಪ್ರಯೋಜನ ವಸ್ತುವನ್ನು ಪ್ರಸ್ತಾಪಿಸುವಾಗ ಕನ್ನಡ ಮತ್ತು ಸಂಸ್ಕೃತಗಳೆರಡಲ್ಲಿಯೂ ಇಸು ಸೇರುತ್ತದೆ. ಉದಾ : ಚಿತ್ರಿಸಿದಂ ಕೇಶಿರಾಜನು ಹೀಗೆ ಹೇಳಿದರೂ ಸಂಸ್ಕೃತದಲ್ಲಿ ಅನ್ಯಕರ್ತೃಗಳಿಗೆ ಇಸು ಸೇರುವುದು ಶೋಭಿಸುವುದಿಲ್ಲ ; ಉದಾ : ಭಾವಿಸಿಸು, ಪ್ರೀತಿಸಿಸು ಎಂಬಂತಹ ರೂಪಗಳಿರುವುದಿಲ್ಲ.

## 4.7 ಕನ್ನಡದ ಅಸಾಧಾರಣ ಲಕ್ಷಣಗಳು

ಶಬ್ದಮಣಿದರ್ಪಣದ ಕಡೆಯಲ್ಲಿ ಕೇಶಿರಾಜನು ಸಂಸ್ಕೃತಕ್ಕೆ ಅನ್ವಯಿಸದೆ ಇರುವ ಕೆಲವು ಕನ್ನಡದ ಲಕ್ಷಣಗಳನ್ನು ಅಸಾಧಾರಣ ಲಕ್ಷಣಗಳೆಂದು ಕರೆದಿದ್ದಾನೆ. ಅವುಗಳೆಂದರೆ.

1. ಗಮಕ ಸಮಾಸ 2. ಱಟಕುಳಕ್ಷಳ 3. ಶ್ರುತಿಸಹ್ಯಸಂಧಿ, 4. ಸತಿಸಪ್ತಮಿ 5. ಸಮಸಂಸ್ಕೃತ 6. ವ-ಮ ಹ-ಪ ಭೇದ 7. ವಿರಹಿತಾವ್ಯಯ ಸಂಸ್ಕೃತ ಲಿಂಗ 8. ಪದೋತ್ತಮ ಶಿಥಿಲತ್ವ 9. ಯತಿ ವಿಲಂಘನ. ಅಸಾಧಾರಣ ಎಂದಾಗ ನಾವು ಅದ್ಭುತವೆಂದು ಭಾವಿಸುತ್ತೇವೆ. ಆದರೆ ಸಂಸ್ಕೃತ ಕನ್ನಡ ಎರಡಕ್ಕೂ ಅನ್ವಯಿಸಿದಾಗ ಸಾಧಾರಣ ಆಗುತ್ತದೆ. ಕನ್ನಡ ಒಂದಕ್ಕೆ ಅನ್ವಯಿಸಿದರೆ ಅಸಾಧಾರಣ ಆಗುತ್ತದೆ ಎಂಬ ಅಭಾವಾತ್ಮಕ ಅರ್ಥವನ್ನು ಗ್ರಹಿಸಿದರೂ ತಪ್ಪಾಗಲಾರದು. ಇಲ್ಲದಿದ್ದರೆ ಕನ್ನಡದ ದೊಡ್ಡಸ್ತಿಕೆಯ ಮಾತಾಗುತ್ತದೆ. ಅದು ಅಗಬಾರದೆಂದೇನೂ ಇಲ್ಲ.

1. ಕೇಶಿರಾಜನ ಪ್ರಕಾರ ಇದು ಸಂಸ್ಕೃತದಲ್ಲಿಲ್ಲ. ಗಮಕ ಸಮಾಸ ಎಂಬ ಮಾತನ್ನು ಕವಿರಾಜಮಾರ್ಗದಲ್ಲಿ ಮೊದಲು ನೋಡುತ್ತೇವೆ. ಇದು ಕರ್ಮಧಾರಯದ ಒಂದು ಭೇದವೂ ಆಗಿದೆ. ಪಿರಿದು + ಆನೆ = ಪೇರಾನೆ, ಬಿಳಿದು + ಕೊಡೆ = ಬೆಳ್ಗೊಡೆ ಎಂಬುವು ಕರ್ಮಧಾರಯ ಸಮಾಸವಾಗುತ್ತವೆ. ಆದರೆ ಬಿಳಿಯ ಕೊಡೆ, ಪಿರಿಯ ಆನೆ ಎಂದು ಬರೆದರೆ ಗಮಕ ಸಮಾಸವಾಗುತ್ತವೆ, ಸಮಾಸದಂತೆ ಕಾಣುತ್ತವೆ. ಬಿಳಿಯ ಪಿರಿಯ ಎಂಬ ಪದಗಳಲ್ಲಿ 'ಯ'ದ ಕಡೆಯಲ್ಲಿ 'ಅ'ಕಾರವಿದೆ, ಳಿ, ರಿ ಎಂಬ ಅಕ್ಷರಗಳ ಕಡೆಯಲ್ಲಿ 'ಇ'ಕಾರವಿದೆ. ಇದನ್ನು ಕೇಶಿರಾಜನು 'ಕಡೆಗತ್ವಂ, ಪೆರಗಿತ್ವಂ' ಎಂದು ಗಮಸ ಸಮಾಸದ ಲಕ್ಷಣವನ್ನು ವಿವರಿಸುತ್ತಾನೆ.

2. ಱಳ ; ಕುಳ ; ಕ್ಷಳ - ಇವುಗಳ ಉಚ್ಚಾರಣೆಯು 'ಳ' ಇದ್ದಹಾಗೆ. ಟ ಎಂಬುದು

ಹತ್ತನೆಯ ಶತಮಾನದ ವೇಳೆಗೆ ಕಡಿಮೆಯಾಗಲು ಪ್ರಾರಂಭವಾಗಿತ್ತು. ಐ ಮತ್ತು ಳ ಎರಡನ್ನೂ ಒಂದೇ ಅರ್ಥದಲ್ಲಿ ಪ್ರಯೋಗಿಸುವ ಪ್ರಯತ್ನ ನಡೆದಿತ್ತು. ಬಾಳ್ - ಬಾೞ್ ; ಅೞಿ - ಅಳಿ ಎಂಬ ಶಬ್ದಗಳು ಬೇರೆ ಬೇರೆ ಅರ್ಥಗಳನ್ನು ಕೊಡುತ್ತಿದ್ದುವು ಅಳಿ, ಬಾಳ್ ಎಂಬಂತೆ ಎರಡನ್ನೂ ಬರೆದರೆ ಒಂದು ಅರ್ಥ ಮರೆಯಾಗಬೇಕಾಗುತ್ತದೆ. ಹಳಗನ್ನಡದಲ್ಲಿ ಹಾಗಿತ್ತು ಎಂದು ವಿವರಿಸಬೇಕಾಗುತ್ತದೆ. ಭಾಷೆಯ ಆಯಾಮ ಕಡಿಮೆಯಾಗುತ್ತದೆ. ಆದರೂ ಕವಿಗಳು ಕ್ರಮೇಣ ಅದನ್ನು ಬಿಡಲಾರಂಭಿಸಿದರು. ಕ್ಷಳ = ಸಂಸ್ಕೃತ 'ಲ'. ಇದು ಕನ್ನಡಕ್ಕೆ ಬಂದಾಗ ಸಂದರ್ಭಕ್ಕೆ ತಕ್ಕಂತೆ 'ಳ' ಆಗಿ ಬಳಕೆಗೆ ಬಂದಿತು. ಫಲ > ಫಳ, ಬಲ > ಬಳ, ಕಾಲಿ > ಕಾಳಿ ; ಇಂತಹ ಬದಲಾವಣೆಯೂ ಕೂಡ ಕಾಲಕ್ರಮೇಣ ಕಡಿಮೆಯಾಗತೊಡಗಿತು. ಪ್ರಾಸಸ್ಥಾನದಲ್ಲಿ ಅದರ ಅಗತ್ಯವು ಕವಿಗಳಿಗೆ ಕಂಡು ಬಂದಿತ್ತು. ಈಗ ೞ, ಳ (ಕ್ಷ)ಳ ಎಂಬ ಮೂರು ಅಕ್ಷರಗಳು ಒಂದೇ ಧ್ವನಿಯನ್ನು ಪ್ರತಿನಿಧಿಸುವ 'ಳ' ಆಗಿಬಿಟ್ಟಿವೆ. ಕೇಶಿರಾಜನ ಕಾಲದಲ್ಲಿ ೞ, (ಕು)ಳ ಗಳು ಕನ್ನಡದಲ್ಲಿ ಮಾತ್ರ ಇದ್ದುದರಿಂದ ಅಸಾಧಾರಣ ಎನ್ನಿಸಿಕೊಂಡಿದ್ದುವು.

3. ಸಂಧಿಗೆ ಸಂಬಂಧಿಸಿದ ಮಾತು - ಶ್ರುತಿಸಹ್ಯಸಂಧಿ. ಸಂಧಿಯಾಗುವಾಗ ಅದರ ಉಚ್ಚಾರಣೆ ಕಿವಿಗೆ ಹಿತವಾಗುವಂತಿರಬೇಕು ಎಂಬುದನ್ನು ಈ ವಿಚಾರವು ತಿಳಿಸುತ್ತದೆ. ಬಂದರ್ + ರಾಮರ್ = ಬಂದರ್ರಾಮರ್ ವಿದ್ವಿಟ್ + ಸ್ತ್ರೀಯರ್ = ವಿದ್ವಿಟ್ಸ್ತ್ರೀಯರ್ ಎಂಬಂತಹ ಸಮಾಸಗಳು ಉಚ್ಚಾರಣೆಗೂ ಕಷ್ಟ ಮತ್ತು ಕಿವಿಗೂ ಸುಶ್ರಾವ್ಯವಲ್ಲ. ಕೆಲವು ಸಲ ಮೆಚ್ಚುತ + ಉಣ್ಣಂ = ಮೆಚ್ಚುತುಣ್ಣಂ ಎಂದು ಬರೆದಾಗ ಅಪಾರ್ಥಗಳೂ ಹುಟ್ಟುತ್ತವೆ. ಆದ್ದರಿಂದ ಕೇಶಿರಾಜನು ಇಂತಹ ಸಂದರ್ಭಗಳಲ್ಲಿ ಸಂಧಿಯನ್ನು ಮಾಡಬೇಡಿ ಎಂದು ತನ್ನ ಸೂಕ್ಷ್ಮ ಪ್ರಜ್ಞೆಯನ್ನು ಮೆರೆದಿದ್ದಾನೆ. ಸಂಸ್ಕೃತದಲ್ಲಿ ಕ್ಲಿಷ್ಟ ಸಮಾಸಗಳಿದ್ದರೂ ಕನ್ನಡದಲ್ಲಿ ಬೇಡ ಅಥವಾ ಕಡಿಮೆ ಎಂಬ ಭಾವನೆಯಿಂದ ಈ ವಿಚಾರವೂ ಕನ್ನಡಕ್ಕೆ ವಿಶಿಷ್ಟವಾದುದು ಎನ್ನುತ್ತಾನೆ.

4. ಸತಿ ಸಪ್ತಮಿ : ಇದರ ಕಲ್ಪನೆಯು ಸಂಸ್ಕೃತದಿಂದ ಬಂದಿದೆ. ಸತ್ ಎಂಬುದರ ಸಪ್ತಮೀ ವಿಭಕ್ತಿ ರೂಪವು ಸತಿ ಎಂದಾಗುತ್ತದೆ. ಸತಿ ಎಂದರೆ 'ಇರುವಾಗ, ಇರುವ ಸಂದರ್ಭದಲ್ಲಿ' ಎಂದು ಅರ್ಥ. ಒಂದೇ ಕಾಲದಲ್ಲಿ ಎರಡು ಕ್ರಿಯೆಗಳು ನಡೆಯುವುದನ್ನು ಇದು ಸೂಚಿಸುತ್ತದೆ. ಎರಡು ಕರ್ತೃಗಳು, ಎರಡು ಕ್ರಿಯಾಪದಗಳು ಇರುತ್ತವೆ. ಮೊದಲನೆಯ ಕ್ರಿಯಾಪದದ ಮೇಲೆ 'ಎ' ಎಂಬ ಪ್ರತ್ಯಯ ಬರುತ್ತದೆ.

ಉದಾ : ಗಾಯಕಂ ಪಾಡೆ ದೇವಂ ಮೆಚ್ಚಿದಂ

ಗಾಯಕಂ ಪಾಡಲ್ ದೇವಂ ಮೆಚ್ಚಿದಂ .........

'ಎ'ಕಾರಕ್ಕೆ ಬದಲಾಗಿ ಅಲ್, ಅಲೊಡಂ, ಇನಗಂ, ಉದುಂ, ಅನ್ನಂ, ಅನ್ನೆಗಂ, ಇನಂ ಇತ್ಯಾದಿಗಳೂ ಬರಬಹುದು.

5. ಇಲ್ಲಿ ಸಾಮಾನ್ಯವಾಗಿ ತತ್ಸಮವೆಂದು ತಿಳಿದಿರುವ ಶಬ್ದಗಳನ್ನು 'ಸಮಸಂಸ್ಕೃತ' ಎಂದು ಕರೆದಿದ್ದಾನೆ. ಅವನ ದೃಷ್ಟಿಯಲ್ಲಿ ತತ್ಸಮಗಳು ಎಂದರೆ ಸಂಸ್ಕೃತ ಮತ್ತು ಕನ್ನಡ ಎರಡಕ್ಕೂ ಸಮಾನವಾದ ಶಬ್ದಗಳು. ಉದಾಹರಣೆಗೆ ಮಣಿ, ಪಟ್ಟಂ, ಮಂಚಂ .... ಇತ್ಯಾದಿಗಳು.

ಸಮಸಂಸ್ಕೃತಗಳು ಎಂದರೆ ಅತ್ಯಲ್ಪ ಬದಲಾವಣೆಯೊಡನೆ ಕನ್ನಡಕ್ಕೆ ಬಂದು ಕನ್ನಡದ ನಾಮಪ್ರಕೃತಿಗಳಿಗೆ ಸಮನಾಗಿ ಇರುವ ಶಬ್ದಗಳು. ಸಮಸಂಸ್ಕೃತಗಳನ್ನು ಅಚ್ಚಗನ್ನಡದೊಡನೆ ಸೇರಿಸಿ ಸಮಾಸ ಮಾಡಬಾರದು ಎಂದು ಕೇಶಿರಾಜನು ಹೇಳಿದ್ದಾನೆ. ಸಮಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಅಧಿಕ ಪ್ರಮಾಣದಲ್ಲಿವೆ. ಅಷ್ಟೇ ಅಲ್ಲ ಅವು ಕನ್ನಡದ ಶಬ್ದಗಳೆಂದೇ ಜನರು ತಿಳಿಯುತ್ತಾರೆ. 'ಅನ್ನ'

ಎಂಬುದನ್ನು ಯಾರುತಾನೆ ಕನ್ನಡವಲ್ಲ ಎಂದು ತಿಳಿಯುತ್ತಾರೆ. ಸಮಸಂಸ್ಕೃತಗಳು ಇರುವ ಪ್ರಮಾಣವನ್ನು ನೋಡಿಯೇ ಕನ್ನಡವು ಸಂಸ್ಕೃತದಿಂದ ಹುಟ್ಟಿದ ಭಾಷೆ ಎಂದು ಹೇಳಲಾಗುತ್ತಿತ್ತು. ಮಾಲೆ, ಕರುಣ, ವಧೆ, ಅಭಿಲಾಷೆ, ಭುವನ, ಪಶು, ಶಿಶು, ಯತಿ, ಮತಿ, ಮಾತೃ ಪಿತೃ, ಪ್ರಶ್ನೆ, ಯಶಸ್ಸು ವಿದ್ವಾಂಸ, ಸೂರ್ಯ, ಸಂಪತ್ತು, ಅಂತರ್ಮುಖಿ, ಏಕಾಂಗಿ.....ಇತ್ಯಾದಿ ಅಸಂಖ್ಯ ಶಬ್ದಗಳೇ ಕನ್ನಡ ಶಬ್ದಕೋಶದಲ್ಲಿವೆ.

6. ವ-ಮ; ಹ-ಪ ಭೇದ ವಿಚಾರ. ಇದು ನಿಜವಾಗಿ ಮ > ವ ಮತ್ತು ಪ > ಹ ಎಂಬ ಬದಲಾವಣೆಗಳನ್ನು ಸೂಚಿಸುತ್ತದೆ.

ಮರ + ಮಣೆ - ಮರವಣೆ ; ಪಟು + ಮಾನಿಸನ್ = ಪಟುವಾನಿಸನ್; ಮೇಲ್ + ಮಾತು = ಮೆಲ್ವಾತು.

ಸೂತ್ರ 114ರಲ್ಲಿ ತಿಳಿಸಿರುವ ಅಂಶಗಳು ಹೀಗಿವೆ.

1. ಬಿಂದುವಿಗೆ ಸ್ವರಪರವಾದಗ ನಕಾರ ಅಥವಾ ಮಕಾರ ಆದೇಶವಾಗುತ್ತದೆ.

2. ಕೆಲವು ಸಲ ಹಾಗೆ ಆದೇಶವಾದ ಮಕರಾಕ್ಕೆ ವ ಕಾರ ಬರುತ್ತದೆ.

3. ಪದಾಂತರ್ಗತ (ಪದಮಧ್ಯದ) ಸಹಜ ಮಕಾರವೂ ಸಹ ವಕಾರವಾಗಬಹುದು.

ಉದಾ : ಕಾಣ್ಬಂದಂ + ಎಂತೋ > ಕಾಣ್ಬಂದಮೆಂತೋ > ಕಾಣ್ಬಂದವೆಂತೋ

ಶೌಚಂ + ಅಣ್ಣು > ಶೌಚಮಣ್ಮು > ಶೌಚವಣ್ಮು

ತಾಮರೆ > ತಾವರೆ ; ಸಾಮಂತ > ಸಾವಂತ ; ತಿಮಿರ್ > ತಿವಿರ್ ;

ತೆಮರ್ > ತೆವರ್

ದ್ರಾವಿಡ ಭಾಷೆಯಲ್ಲಿ 'ಹ' ಕಾರವು ಸಹಜವಾಗಿ ಇಲ್ಲ. ದ್ರಾವಿಡಕ್ಕೆ ಸೇರಿದ ಕನ್ನಡದಲ್ಲಿ ಅದು ಒಂಬತ್ತನೆಯ ಶತಮಾನದ ವೇಳೆಗೆ ಅಲ್ಲಲ್ಲಿ ಕಾಣಿಸಿಕೊಂಡಿತು, ಶಾಸನಗಳಲ್ಲಿಯೂ ಅದರ ಬಳಕೆ ಕಂಡು ಬಂದಿತು, ಇದನ್ನು ಮಹಾಪ್ರಾಣಾಕ್ಷರವೆದು ಕರೆಯಬಹುದು. ತಮಿಳಿನಲ್ಲಿ ಜನಪದರು 'ಹ' ಕಾರವನ್ನು ಬಳಸುವುದಿಲ್ಲ.

ಕೇಶಿರಾಜನು 'ಕನ್ನಡ ಶಬ್ದದ ಪಕಾರಕ್ಕೆ ವಿಕಲ್ಪದಿಂದ 'ಹ' ಕಾರ ಬರುತ್ತದೆ. ದ್ವಿತ್ವವಿದ್ದರೆ ವಿಶೇಷವಾಗಿ ಹ ಕಾರ ಬರುವುದಿಲ್ಲ' ಎಂದು ಹೇಳಿದ್ದಾನೆ. 11ನೇ ಶತಮಾನದಲ್ಲಿ ಕಾವ್ಯಗಳಲ್ಲಿ ಹ ಕಾರವು ವ್ಯಾಪಕವಾಗಿ ಕಂಡುಬಂದಿದೆ. ಪದದ ಆದಿಯ ಪ ಕಾರವು ಹ ಕಾರವಾಗತೊಡಗಿತ್ತು. ಸಂಸ್ಕೃತದಿಂದ ಕನ್ನಡಕ್ಕೆ ಬಂದ ಶಬ್ದಗಳಲ್ಲಿಯೂ ಪ ಕಾರವು ಹ ಕಾರವಾಯಿತು.

ಉದಾ : ಪಶು > ಹಸು ; ಪಕ್ಷಿ > ಹಕ್ಕಿ ; ಪಲ್ಲಿ > ಹಲ್ಲಿ ; ತೈಲಪ > ತೈಲಹ ; ಪಂದಿ > ಹಂದಿ; ಪಾಲು > ಹಾಲು ; ಪುಲಿ > ಹುಲಿ ಇತ್ಯಾದಿ. ಒತ್ತಕ್ಷರವಿದ್ದಾಗ ಅಪರೂಪಕ್ಕೆ ಹ ಕಾರ ಬರುತ್ತದೆ : ಅಪ್ಪುದು > ಅಹುದು ; ಬರ್ಪ > ಬಹ ಇತ್ಯಾದಿ.

7. ವಿರಹಿತಾವ್ಯಯ ಸಂಸ್ಕೃತಲಿಂಗ : ಕನ್ನಡದ ಅವ್ಯಯಗಳು ಇರುವ ಹಾಗೆ ಸಂಸ್ಕೃತದಿಂದ

ಸ್ವೀಕೃತವಾದ ಅವ್ಯಯಗಳೂ ಇವೆ. ಅವುಗಳು ನೇರವಾಗಿ ಲಿಂಗವಾಗುವುದಿಲ್ಲ (ನಾಮಪ್ರಕೃತಿ). ಇವುಗಳು ಸಂಸ್ಕೃತ ನಾಮಪದಗಳೊಡನೆ ಸೇರಿ ಸಮಾಸವಾದ ನಂತರ ಲಿಂಗವಾಗುತ್ತವೆ. ಅಂತರ್, ಬಹಿರ್ ಮುಂತಾದುವು ಅಂತರ್ಮುಖಿ, ಬಹಿರ್ಮುಖಿ ಎಂದು ಸಮಾಸವಾಗಿ ಅನಂತರ ವಿಭಕ್ತಿ ಪ್ರತ್ಯಯಗಳನ್ನು ಪಡೆದುಕೊಳ್ಳುತ್ತವೆ.

8. ಪದೋತ್ತಮ ಶಿಥಿಲತ್ವ : ಶಿಥಿಲದ್ವಿತ್ವ ಎಂದರೆ ಒತ್ತಕ್ಷರವನ್ನು ತೇಲಿಸಿ ಉಚ್ಚರಿಸುವುದು. ಪ್ರತ್ಯಯಗಳು ಸೇರುವಾಗ, ಸಮಾಸವಾಗುವಾಗ ಶಿಥಿಲತ್ವ ಉಂಟಾಗುತ್ತದೆ. ಓದುವ ಸಂದರ್ಭದಲ್ಲಿ ಶಿಥಿಲತ್ವದ ಅರಿವು ಉಂಟಾಗುತ್ತದೆ. ಇತರ ದ್ರಾವಿಡ ಭಾಷೆಗಳಲ್ಲಿ ಇಲ್ಲದಿರುವುದರಿಂದ ಶಿಥಿಲತ್ವವನ್ನು ಕನ್ನಡದ ವಿಶಿಷ್ಟ ಲಕ್ಷಣ ಎಂದು ಕೇಶಿರಾಜ ತಿಳಿಸುತ್ತಾನೆ. (ಶಿಥಿಲತ್ವದ ಬಗ್ಗೆ ಮೊದಲೇ ಓದಿದ್ದೀರಿ)

9. ಯತಿ ವಿಲಂಘನ : ಕನ್ನಡ ಕೈಪಿಡಿಯಲ್ಲಿ 'ಪದ್ಯಗಳನ್ನು ಓದುವಾಗ ಅರ್ಥವ್ಯಕ್ತಿಯು ಕೆಡದಂತೆ ನಿರ್ದಿಷ್ಟವಾದ ಕಡೆ ನಿಲ್ಲಿಸುವುದು' ಎಂದು ಯತಿಯ ಬಗ್ಗೆ ಹೇಳಲಾಗಿದೆ. ಯತಿ ಎಂಬುದು ಉಸಿರನ್ನು ಎಳೆದುಕೊಳ್ಳಲು ಓದುವುದನ್ನು ನಿಲ್ಲಿಸಿ ಮತ್ತೆ ಮುಂದುವರಿಸುವುದು ಎಂದು ಸರಳವಾಗಿ ತಿಳಿದುಕೊಳ್ಳಬಹುದು. ಹಾಗೆ ಮಾಡುವಾಗ ಅರ್ಥವು ಕೆಡಬಾರದು, ಪದಚ್ಛೇದವಾಗಬಾರದು. ಇಲ್ಲದಿದ್ದರೆ ಯತಿಭಂಗ ಎಂಬ ದೋಷ ಉಂಟಾಗುತ್ತದೆ. ಸಂಸ್ಕೃತದಲ್ಲಿ ಯತಿಯು ಕಡ್ಡಾಯವಾಗಿ ನಿಯತವಾಗಿ ಬರುತ್ತದೆ. ಕನ್ನಡದಲ್ಲಿ ಯತಿಯನ್ನು ಪಾಲಿಸುವುದನ್ನು ಬಿಟ್ಟು ಪ್ರಾಸಕ್ಕೆ ಮನ್ನಣೆ ನೀಡಲಾಯಿತು. ಕನ್ನಡದಲ್ಲಿ ಯತಿ ಎಂಬುದು ಪೂರ್ವನಿರ್ಧಾರಿತ ವಿಧಿಯಲ್ಲವಾದರೂ ಉಸಿರನ್ನು ಎಳೆದುಕೊಳ್ಳದೆ ಓದಬೇಕೆಂದು ಅರ್ಥವಲ್ಲ. ಕಂದ ಪದ್ಯದಲ್ಲಿ ಯತಿ ಬರುತ್ತದೆ. ವಿಶೇಷವಾಗಿ ಸಂಸ್ಕೃತದ ವೃತ್ತಗಳು ಕನ್ನಡಕ್ಕೆ ಬಂದಾಗ ಯತಿ ಪಾಲನೆ ಆಗುವುದಿಲ್ಲ ಎಂದು ತಿಳಿಯಬೇಕು. ಯತಿ ಇದ್ದರೂ ಯಾವ ನಿಶ್ಚಿತ ನಿರ್ಬಂಧಕ್ಕೆ ಒಳಗಾಗಿ ಇರುವುದಿಲ್ಲ.

## 4.8 ಪರೀಕ್ಷಾ ವಿಷಯಗಳು

### 4.8.0. ಸ್ವಪರೀಕ್ಷೆ ಪ್ರಶ್ನೆಗಳು

1. ಆಖ್ಯಾತ ಪ್ರತ್ಯಯಗಳು ಎಷ್ಟು ; ಯಾವುವು ?

..........................................................................................

..........................................................................................

..........................................................................................

2. ಕ್ರಿಯಾಪದದಲ್ಲಿ ಎಷ್ಟು ಬಗೆ ? ಯಾವುವು ?

..........................................................................................

..........................................................................................

..........................................................................................

3. ವಿಕರಣಗಳು ಎಂದರೇನು ? ಅವುಗಳು ಎಷ್ಟು ?

..........................................................................................

..........................................................................................

4. ಕ್ರಿಯಾ ಧಾತುವನ್ನು ಗುರುತಿಸುವುದು ಹೇಗೆ ?

.....................................................................................................................

.....................................................................................................................

.....................................................................................................................

5. ಅಲ್ ಎಂಬ ಪ್ರತ್ಯಯದ ವೈಶಿಷ್ಟ್ಯವೇನು ?

.....................................................................................................................

.....................................................................................................................

.....................................................................................................................

6. ಕೇಶಿರಾಜನು ಹೇಳುವ ಅಪಭ್ರಂಶ ಎಂದರೇನು ?

.....................................................................................................................

.....................................................................................................................

.....................................................................................................................

7. ಸಮಸಂಸ್ಕೃತಕ್ಕೂ ತತ್ಸಮಕ್ಕೂ ಕೇಶಿರಾಜನು ತೋರುವ ವ್ಯತ್ಯಾಸವೇನು ?

.....................................................................................................................

.....................................................................................................................

.....................................................................................................................

8. ಸತಿಸಪ್ತಮಿ ಎಂದರೇನು ?

.....................................................................................................................

.....................................................................................................................

.....................................................................................................................

9. ಅವ್ಯಯಗಳು ಎಂದರೇನು ?

.....................................................................................................................

.....................................................................................................................

.....................................................................................................................

10. ಯತಿವಿಲಂಘನ ಎಂದರೇನು ?

.....................................................................................................................

.....................................................................................................................

.....................................................................................................................

**4.8.1 ಸ್ವಪರೀಕ್ಷೆ ಪ್ರಶ್ನೆಗಳಿಗೆ ಉತ್ತರಗಳು**

1. ಅಖ್ಯಾತ ಪ್ರತ್ಯಯಗಳು ಆರು. ಪ್ರಥಮ ಪುರುಷ, ಮಧ್ಯಮ ಪುರುಷ, ಉತ್ತಮಪುರುಷ ಇವುಗಳಿಗೆ ಸೇರಿದ ಏಕವಚನ ಮತ್ತು ಬಹುವಚನ ಪ್ರತ್ಯಯಗಳು ಕ್ರಮವಾಗಿ ಅಮ್, ಆರ್ ; ಅಯ್, ಇರ್ ; ಎನ್, ಎವು.

2. ಕ್ರಿಯಾಪದದಲ್ಲಿ ಸಾಮಾನ್ಯಾರ್ಥಕ, ನಿಷೇಧಾರ್ಥಕ, ವಿಧ್ಯರ್ಥಕ ಮತ್ತು ಪ್ರೇರಣಾರ್ಥಕ ಎಂಬ ನಾಲ್ಕು ಬಗೆಗಳಿವೆ. ಸಾಮಾನ್ಯಾರ್ಥಕ : ತಾಯಿಯು ಅಡಿಗೆಯನ್ನು ಮಾಡುತ್ತಾಳೆ ಇತ್ಯಾದಿ; ವಿಧ್ಯರ್ಥಕ : ನೀನು ಆ ಕೆಲಸವನ್ನು ಮಾಡು ; ದೇವರು ನಿನಗೆ ಒಳ್ಳೆಯದನ್ನು ಮಾಡಲಿ.

ನಿಷೇಧಾರ್ಥಕ : ಅವನು ಅದನ್ನು ಮಾಡುವುದಿಲ್ಲ ಇತ್ಯಾದಿ.

ಪ್ರೇರಣಾರ್ಥಕ : ಆ ಕೆಲಸವನ್ನು ಮಾಡಿಸು, ಇತ್ಯಾದಿ.

ಹಳಗನ್ನಡ ಉದಾಹರಣೆಗಳನ್ನು 4.2 ರಲ್ಲಿ ನೋಡಬಹುದು.

3. ಕಾಲವಾಚಕ ಪ್ರತ್ಯಯಗಳನ್ನು ವಿಕಿರಣಗಳು ಎಂದೂ ಕರೆಯುತ್ತಾರೆ. ಅವುಗಳು ಕ್ರಮವಾಗಿ ಭೂತಕಾಲಕ್ಕೆ 'ದ' ಎಂಬುದು, ವರ್ತಮಾನ ಕಾಲಕ್ಕೆ 'ದಪ' ಎಂಬುದು, ಭವಿಷ್ಯತ್ಕಾಲಕ್ಕೆ 'ವ' ಎಂಬುದು ಆಗಿವೆ. ಇವು ಆಖ್ಯಾತ ಪ್ರತ್ಯಯಗಳು ಸೇರುವ ಮೊದಲೇ ಬರುತ್ತವೆ.

ಭೂತಕಾಲ : ಪಡೆ + ದ + ಅನ್= ಪಡೆದನ್ / ಪಡೆದಂ

ವರ್ತಮಾನ : ಎತ್ತು + ಇ + ದಪ = ಎತ್ತಿದಪನ್ / ಎತ್ತಿದಪಂ

ಭವಿಷ್ಯತ್ = ಪಡೆ + ವ+ಅನ್= ಪಡೆವನ್ / ಪಡೆವಂ

4. ಕೇಶಿರಾಜನು ಕ್ರಿಯಾಪದದ ಮೂಲಾಂಶವಾದ ಧಾತುವಿನ ಬಗ್ಗೆ ತಿಳಿಸುತ್ತಾ' ಕ್ರಿಯೆಯ ಅರ್ಥದ ಮೂಲಂ, ಪ್ರತ್ಯಯರಹಿತಂ, ಅದಂ ಅಭಾವ ಕ್ರಿಯೆಯೊಳ್ ನಿಯತಂ ನಿಶ್ಚಯಿಪುದು'ಎಂದು ಹೇಳಿದ್ದಾನೆ. ಧಾತುವನ್ನು ಗುರುತಿಸಲು ಯಾವುದಾದರೊಂದು ನಿಷೇಧಾರ್ಥಕ ಕ್ರಿಯಾಪದದಲ್ಲಿ ಆಖ್ಯಾತ ಪ್ರತ್ಯಯವನ್ನು ತೆಗೆದರೆ ವೇದ್ಯವಾಗುತ್ತದೆ. ಮಾಡಿದಂ ಎಂಬುದರ ನಿಷೇದಾರ್ಥಕ ರೂಪ ಮಾಡಂ ಎಂಬುದು. ಇದನ್ನು ಬಿಡಿಸಿದರೆ ಮಾಡು +ಅಂ ಎಂದಾಗುತ್ತದೆ'ಅಂ' ಎಂಬ ಪ್ರತ್ಯಯವನ್ನು ಕಳೆದರೆ 'ಮಾಡು'ಎಂಬುದು ಸಿಗುತ್ತದೆ. ಅದೇ ಧಾತು ಎಂಬುದು ಕೇಶಿರಾಜನ ಅಭಿಪ್ರಾಯ. ಮಧ್ಯಮ ಪುರುಷ ಏಕವಚನದಲ್ಲಿ ಬಹುಮಟ್ಟಿಗೆ ಧಾತುವೇ ಪ್ರಯೋಗವಾಗುತ್ತದೆ. ಧಾತುವನ್ನು ಇಲ್ಲಿ ಸುಲಭವಾಗಿ ಗ್ರಹಿಸಬಹುದು. ಕೇಶಿರಾಜನೂ ಕೂಡ 'ಪರಿಣಮಿಸಿರ್ಕುಂ ಪ್ರಕೃತಿ ಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್' ಎಂದು ಹೇಳಿದ್ದಾನೆ. ನೋಡು, ಮಾಡು, ಕೇಳು, ಹೋಗು, ತಿನ್, ಮೀ, ನಿಲ್, ಇತ್ಯಾದಿಗಳು ಧಾತುಗಳಾಗಿವೆ.

5. ಮಧ್ಯಮಪುರುಷ ವಿಧ್ಯರ್ಥಕ ಕ್ರಿಯಾಪದವು ನಿಷೇಧಾರ್ಥವನ್ನು ವ್ಯಕ್ತ ಪಡಿಸುವಲ್ಲಿ 'ಅಲ್' ಎಂಬ ಪ್ರತ್ಯಯ ಬರುತ್ತದೆ. ಯಾವುದಾದರೂ ಪ್ರಯೋಜನ ವಸ್ತುವಿನ ಸಂದರ್ಭದಲ್ಲಿ ಅದಕ್ಕೆ ಸಂಬಂಧಿಸಿದ ಕ್ರಿಯೆಯಮೇಲೆ 'ಅಲ್' ಪ್ರತ್ಯಯ ಬರುತ್ತದೆ. ಒಂದು ಕ್ರಿಯೆಯು ಮತ್ತೊಂದು ಕ್ರಿಯೆಯ ಅರ್ಥವನ್ನು ಸೂಚಿಸುವಲ್ಲಿ ಅಲ್ ಪ್ರತ್ಯಯ ಬರುತ್ತದೆ. ನಿಷೇದಾರ್ಥವಲ್ಲದ ಕೆಲವು ಕಡೆಗಳಲ್ಲಿ ಅಲ್ ಎಂಬುದಕ್ಕೆ 'ಕ' ಕಾರವು ಸೇರುತ್ತದೆ. ಉದಾಹರಣೆಗಳನ್ನು ನೋಡಿ-

- ವಿಧ್ಯರ್ಥ ನಿಷೇದಾರ್ಥಕ್ಕೆ : ಉಸಿರ್ + ಅಲ್+ ಇಂ = ಉಸಿರಲಿಂ (ಉಸಿರಬೇಡಿ)
  ಮೀಱು+ಅಲ್ + ಇಂ = ಮೀಱಲಿಂ (ಮೀರಬೇಡಿ)
- ವಿಧ್ಯರ್ಥವಲ್ಲದ ನಿಷೇದಾರ್ಥಕ್ಕೆ : ಬನದೊಳ್ ಪುಗಲ್ ಪುಗಲೆಂಬ ಗಂಡುಗೋಗಿಲೆ

- ಪ್ರಯೋಜನ ವಸ್ತುವಿಗೆ ಕಾರಣವಾದ ಕ್ರಿಯೆಗೆ :

ಮಾತಱೆಯಲ್ತಕ್ಕ ವಿವೇಕಮಂ ; ಬಿಡದೀಯಲ್ತಕ್ಕ ಸಂಪತ್ತಿ

- ಕ್ರಿಯಾರ್ಥವನ್ನು ಸೂಚಿಸುವುದು : ಗೆಲಲ್ ಬಗೆದಂ ; ಪುಗಲ್ ಬಂದಂ
- ಅಲ್‌ಗೆ ಬದಲು ಅಲ್ಕೆ ಪ್ರಯೋಗ : ನುಡಿಯಲ್ಕೆ ಬಲ್ಲಂ ; ಪೋಗಲ್ಕೆ ಕೇಳ್ದಂ
- ಅಲ್ ಪ್ರತ್ಯಯ ಲೋಪಕ್ಕೆ : ಉಡಲ್ವೇಟ್ > ಉಡವೇಟ್

ತೊಡಲ್ವೇಟ್> ತೊಡವೇಟ್

6. ಕೇಶಿರಾಜನು ಹೇಳುವ ಅಪಭ್ರಂಶಗಳು, ನಾವು ಸಾಧಾರಣವಾಗಿ ತಿಳಿದಿರುವ ತದ್ಭವಗಳು. ಸಂಸ್ಕೃತದಿಂದ ಭ್ರಷ್ಟಗೊಂಡು ಕನ್ನಡಕ್ಕೆ ಬಂದಿರುವ ಶಬ್ದಗಳು ಅಪಭ್ರಂಶಗಳು. ಭ್ರಷ್ಟ ಎಂದರೆ ರೂಪವ್ಯತ್ಯಾಸ ಎಂದು ತಿಳಿಯಬೇಕಾಗುತ್ತದೆ. ಪ್ರಾಕೃತ ಭಾಷಾವರ್ಗಕ್ಕೆ ಸೇರುವ ಭಾಷೆಗಳಲ್ಲಿ ಒಂದು ಭಾಷೆಯ ಹೆಸರು ಅಪಭ್ರಂಶ ಎಂದು ಇದೆ. ಆದರೆ ಇಲ್ಲಿ ಆ ಭಾಷೆಯ ವಿಚಾರ ಬಂದಿಲ್ಲ. 'ಸಕ್ಕದದ ತದ್ಭವಂಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇೞ್ವೆಂ' ಎಂದು ಹೇಳುವಾಗ ತದ್ಭವ ಎಂಬ ಶಬ್ದವೂ ಬಂದಿದೆ. ಆದರೆ ಅದು ನಾಮಕರಣ ಗೊಂಡ ಹೆಸರಲ್ಲ. ಅದು ಪ್ರಕ್ರಿಯೆಯ ಹೆಸರಾಗಿ ಪ್ರಯೋಗವಾಗಿದೆ. ಹಲವಾರು ರೀತಿ ಗಳಲ್ಲಿ ಅಪಭ್ರಂಶಗಳು ಸೃಷ್ಟಿಯಾಗಿ ಕನ್ನಡ ಶಬ್ದಕೋಶವನ್ನು ಶ್ರೀಮಂತಗೊಳಿಸಿವೆ. ಕೆಲವು ಅಚ್ಚಗನ್ನಡದ ಅಥವಾ ದ್ರಾವಿಡ ಶಬ್ದಗಳನ್ನು ಅಪಭ್ರಂಶಗಳೆಂದು ಕೊಟ್ಟಿರುವುದನ್ನು ನೋಡಬಹುದು.

7. ನಾವು ತತ್ಸಮ ಎಂದು ಹೇಳುವುದನ್ನು ಕೇಶಿರಾಜನು ಸಮಸಂಸ್ಕೃತ ಎನ್ನುತ್ತಾನೆ. ಆತನ ದೃಷ್ಟಿಯಲ್ಲಿರುವ ತತ್ಸಮಗಳೇ ಬೇರೆ. ತತ್‌ಸಮ ಎಂದರೆ ಸಂಸ್ಕೃತ ಮತ್ತು ಕನ್ನಡ ಎರಡಕ್ಕೂ ಸಮಾನವಾಗಿರುತ್ತವೆ. ಮಣಿ, ಮಂಚಂ, ತೋರಣ, ಬಲ, ಮಾಲೆ. ಮುಂತಾದ ಶಬ್ದಗಳನ್ನು ಹೆಸರಿಸಿ ಅವುಗಳೊಡನೆ ಕನ್ನಡ ಶಬ್ದಗಳು ಸೇರಿ ಸಮಾಸವಾಗಬಹುದು ಎಂದು ತಿಳಿಸುತ್ತಾನೆ. ಉದಾಹರಣೆಗೆ ಮಕುಟಮಣಿ - ಉಡೆಮಣಿ; ಕಾಂಚನ ಮಂಚಂ - ತೂಗು ಮಂಚಂ; ಕಾಂಸ್ಯತೋರಣಂ - ಪಚ್ಚೆದೋರಣಂ. ಸಮಸಂಸ್ಕೃತಗಳಬಗ್ಗೆ ಹೇಳುವುದಾದರೆ ಇಂದು ನಾವು ಬಳಸುತ್ತಿರುವ ಸಂಸ್ಕೃತ ಮೂಲದ ಶಬ್ದಗಳೆಲ್ಲವೂ [ಶೇಕಡ 99 ಸಮಸಂಸ್ಕೃತಗಳು. ಉದಾಹರಣೆಗೆ ಶಿಶು, ಪಶು, ಶ್ರುತಿ, ಮಾಲೆ, ಬಾಲೆ,ಯತಿ, ಮತಿ, ಬಂಧು, ನೇತಾರ, ದಾತಾರ, ಭಾನು, ಧೇನು, ಕಳಶ, ಚರಣ, ಧಾನ್ಯ, ಮೌನ ಇತ್ಯಾದಿ. ನೀವೇ ನಿಮಗೆ ತಿಳಿದಿರುವ ಶಬ್ದಗಳನ್ನು ಪಟ್ಟಿಮಾಡಿನೋಡಿ.

8. ಸತ್ ಎಂಬ ಶಬ್ದದಿಂದ ಸತಿ ಎಂಬುದು ಬಂದಿದೆ. ಸತಿ ಎಂಬುದು ಸಪ್ತಮಿ ವಿಭಕ್ತಿರೂಪದಲ್ಲಿದೆ. ಆದ್ದರಿಂದ ಅದನ್ನು ಸತಿಸಪ್ತಮಿ ಎಂದು ಕರೆಯುತ್ತಾರೆ. ಇದು ಸಂಸ್ಕೃತ ಭಾಷೆಯ ಸಂದರ್ಭದಲ್ಲಿ ಬರುವ ವಿಚಾರವಾಗಿದೆ. ಇಬ್ಬರು ಕರ್ತೃಗಳ ಕ್ರಿಯೆಗಳನ್ನು ಸೂಚಿಸುವಾಗ ಮೊದಲಿನ ಕ್ರಿಯಪದವು ಅಧೀನವಾಗಿಯು ಎರಡನೆಯದು ಪ್ರಧಾನವಾಗಿಯೂ ಬರುತ್ತವೆ. ಅಧೀನ ಕ್ರಿಯಾಪದದ ಮೇಲೆ 'ಎ' ಎಂಬ ಪ್ರತ್ಯಯವು ಹತ್ತುತ್ತದೆ. ಕೆಲವುಸಲ ಎ ಗೆ ಬದಲಾಗಿ ಅಲ್ ಎಂಬ ಪ್ರತ್ಯಯವೂ ಬರುತ್ತದೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ಪ್ರತ್ಯಯಗಳು ಪರ್ಯಾಯವಾಗಿ ಬರುತ್ತವೆಂಬುದನ್ನು ನಾವು ನೋಡುತ್ತೇವೆ. ಅಲೊಡಂ, ಇನೆಗಂ, ಉದುಂ, ಅನ್ನಂ, ಅನ್ನೆಗಂ, ಇನಂ ಇತ್ಯಾದಿ. ಸರಳವಾದ ಉದಾಹರಣೆ ಎಂದರೆ 'ಗಾಯಕಂ ಪಾಡೆ ದೇವಂ ಮೆಚ್ಚಿದಂ '.

9. ಅವ್ಯಯ ಎಂದರೆ ಅ+ವ್ಯಯ. ವ್ಯಯ ಎಂದರೆ ಖರ್ಚು, ಬದಾಲಾವಣೆ ಇತ್ಯಾದಿ. ಯಾವ ಬದಲಾವಣೆಯೂ ಇಲ್ಲದಿರುವ ಶಬ್ದಗಳು ಅವ್ಯಯಗಳು. ಲಿಂಗ, ವಚನ, ವಿಭಕ್ತಿ ಮುಂತಾದುವು ಹತ್ತದಿರುವ ಶಬ್ದಗಳು ಅವ್ಯಯಗಳು, ಅವುಗಳನ್ನು ಕೆಲವು ಗುಂಪುಗಳನ್ನಾಗಿ ವಿಭಾಗಿಸಬಹುದು.

1. ನಿರ್ದಿಷ್ಟಾರ್ಥವುಳ್ಳವು 2. ಸಮುಚ್ಚಯ 3. ನಿಪಾತ 4. ಉಪಮಾ 5. ಅನುಕರಣ 6. ಪ್ರತ್ಯಯಾಂತ 7. ಕಾಲಾರ್ಥ.

- ಆವಗಂ, ನೆಱೆ, ಬಱೆದೆ, ನಿರ್ನೆರಂ, ಇಂತು, ಉಂತು, ಉಸಿಕನೆ ಮತ್ತು ಅಂತಱಿಂದೆ, ಬಟಿಕಂ............ಇವುಗಳು ನಿರ್ದಿಷ್ಟಾರ್ಥ ಅವ್ಯಯಗಳು.
- ಅಂ, ಉಂ, ಎಂಬುವು ಸಮುಚ್ಚಯಾರ್ಥ ಅವ್ಯಯಗಳು
- ಆಃ, ಚಿಃ, ಎಲೆಲೆ, ಏ, ಓ, ಇತ್ಯಾದಿಗಳು ನಿಪಾತಾವ್ಯಯಗಳು
- ಅಂತೆ, ಅಂತಿರೆ, ಅಂತೆವೊಲ್.........ಉಪಮಾವ್ಯಯಗಳು.
- ದಿಗಿಲನೆ, ಭುಗಿಲೆನೆ, ಪಟಪಟನೆ, ದುಡುಮ್ಮನೆ...........ಅನುಕರಣಾವ್ಯಯಗಳು
- ಅದು, ಆನೆಗಳಿಂದ ಕೂಡಿದ ಕಮ್ಮನೆ, ಬಿಮ್ಮನೆ, ಸುಮ್ಮನೆ............ಪ್ರತ್ಯಯಾಂತ- ಅವ್ಯಂತಗಳು
- ಅಂದು, ಇಂದು, ಈಗಳುಂ, ಮುಂತಾದುವು ಕಾಲಾರ್ಥ ಅವ್ಯಯಗಳು.

10. 'ಯತಿಯೆಂಬುದುಸಿರ್ವತಾಣಂ' ಎಂಬುದು ಕವಿರಾಜ ಮಾರ್ಗದಲ್ಲಿ ಬರುವ ಪ್ರಸಿದ್ಧವಾದ ವಿವರಣೆ. ಪದ್ಯಗಳನ್ನು ಒಂದೇ ಉಸಿರಿನಲ್ಲಿ ಓದಲು ಸಾಧ್ಯವಾಗುವುದಿಲ್ಲ. ಅಲ್ಲಲ್ಲಿ ನಿಲ್ಲಿಸಿ ಉಸಿರನ್ನು ಎಳೆದುಕೊಂಡು ಮುಂದುವರಿಯಬೇಕು. ಆದ್ದರಿಂದ ಉಸಿರು ಎಳೆದುಕೊಳ್ಳಲು ಎಲ್ಲೆಲ್ಲೊ ನಿಲ್ಲಿಸಿಬಿಡುವುದು ಸೂಕ್ತವಲ್ಲ. ಅರ್ಥವು ಕೆಡದಂತೆ ನಿಲ್ಲಿಸಬೇಕಾಗುತ್ತದೆ. ಕೇವಲ ಅರ್ಥವು ಕೆಡದಿರುವುದೊಂದೇ ನಿಯಮವಲ್ಲ. ಇನ್ನೂ ಹಲಕೆಲವು ಒಳನಿಯಮಗಳು ಸೇರಿಕೊಂಡು ತೊಂದರೆಯುಂಟುಮಾಡಿದಾಗ, ಇಡೀ ಯತಿಯನ್ನು ಬಿಟ್ಟುಬಿಡುವ ಮನಸ್ಸುಂಟಾಗುತ್ತದೆ. ಕನ್ನಡ ಕವಿಗಳು ಸ್ವೀಕರಿಸಿಕೊಂಡ ಸಂಸ್ಕೃತ ವೃತ್ತಗಳಲ್ಲಿ ಯತಿಪಾಲನೆ ಕಡ್ಡಾಯವಾಗಿ ಆಗಿಲ್ಲ. ಹಾಗೆ ಯತಿಯನ್ನು ಮೀರಿದುದನ್ನೇ ಕೇಶಿರಾಜನು ಅತಿಶಯವೆಂದು ಭಾವಿಸಿ ಯತಿವಿಲಂಘನ ವನ್ನು ವಿಶಿಷ್ಟವಾದ ಕಾರ್ಯ ಎಂದು ಹೇಳಿದ್ದಾನೆ. ಒಟ್ಟಾರೆ 'ಯತಿ' ಎಂಬ ನಿಯಮವನ್ನು ಕನ್ನಡ ಕವಿಗಳು ಮೀರಿದುದರಿಂದ ಅದು ಯತಿ ವಿಲಂಘನ ಎನ್ನಿಸಿಕೊಂಡಿತು. ಹಾಗೆಂದ ಮಾತ್ರಕ್ಕೆ ಯತಿಯೇ ಇಲ್ಲವೆಂದು ತಿಳಿಯಬಾರದು ತ್ರಿಪದಿ, ಕಂದ, ಷಟ್ಪದಿ ಈ ಎಲ್ಲ ರಚನೆಗಳಲ್ಲಿಯೂ ಯತಿಯನ್ನು ಕಾಣಬಹುದು, ಆದರೆ ಯಾಂತ್ರಿಕವಾಗಿ ಅಲ್ಲ.

**4.8.2 ಅಭ್ಯಾಸ ಪ್ರಶ್ನೆಗಳು :**

1. 'ಇಸು' ಪ್ರತ್ಯಯದ ಬಗ್ಗೆ ಬರೆಯಿರಿ.
2. ತದ್ಭವ ರೂಪದ ವೈವಿಧ್ಯತೆಯನ್ನು ತಿಳಿಸಿ
3. ಅಪೂರ್ಣ ಕ್ರಿಯಾಪದದ ಬಗ್ಗೆ ವಿವರಿಸಿ.
4. ಕನ್ನಡ ಶಬ್ದಕೋಶವು ಸಮೃದ್ಧವಾಗುವ ಬಗೆಯನ್ನು ವಿಶದಪಡಿಸಿ.

ಆದೇಶ ಸಂಖ್ಯೆ : ಕರಾಮುವಿ/ಸಿಪಾವಿ/4-813/2007-08, ಚೈತ್ರ ಎಂಟರ್‌ಪ್ರೈಸಸ್, ಬೆಂಗಳೂರು ತಾ|| 08.06.2007
ಕಾಗದ : 60 ಜಿ.ಎಸ್.ಎಂ. - ಎಂ.ಪಿ.ಎಂ. ಮುಖಪುಟ 170 ಜಿ.ಎಸ್.ಎಂ. ಆರ್ಟ್
ಪರಿಮಾಣ : 1200 ಪ್ರತಿಗಳು (ಸಂಖ್ಯೆ 1ರಿಂದ 1200)

## ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಪ್ರಾದೇಶಿಕ ಹಾಗೂ ಅಧ್ಯಯನ ಕೇಂದ್ರಗಳು
## Regional and Study Centres of Karnataka State Open University




(ನಮೂದಿಸಿರುವ ಅಂಕಿ - ಜಿಲ್ಲೆಯಲ್ಲಿರುವ ಒಟ್ಟು ಅಧ್ಯಯನ ಕೇಂದ್ರಗಳ ಸಂಖ್ಯೆಯನ್ನು ಸೂಚಿಸುತ್ತದೆ.)
(The Number indicate the total number of study Centres existing in that districts.)

